ಪ್ರತಿಭಾ ಗ್ರಂಥಮಾಲೆ, ಧಾರವಾಡ. ವರ್ಷ ೩, ಕಿರಣ ೨

# ವಿ ಜ ಯಾ

( ಶರತ್ಕಾದಂಬರಿ )



ಮ. ಗ. ಶೆಟ್ಟಿ, ಅಂಕೋಲಾ



ಎಪ್ರಿಲ್ ೧೯೪೭  ಬೆಲೆ: ೧-೮-೦

ಪ್ರಕಾಶಕರು:
ಬಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ, ಧಾರವಾಡ



ಮುದ್ರಕರು:
ಎಂ. ಜಿ. ಪಾಠೇಕರ
ಹಿಂದಮಾತಾ ಮುದ್ರಣಾಲಯ, ಧಾರವಾಡ

# ವಿಜಯಾ

## ೧

ಆ ಮೂವರು ಹರದಾರಿ ದೂರವಿರುವ ಬೇರೆ ಬೇರೆ ಹಳ್ಳಿಗಳಿಂದ ನಡೆದು ಹುಗಳಿ ಬ್ರ್ಯಾಂಚಿನ ಸ್ಕೂಲಿಗೆ ಬರುತ್ತಿದ್ದರು. ಆ ಸಾಲೆಯ ಮುಖ್ಯೋಪಾಧ್ಯಾಯರು ಅವರನ್ನು ತಮ್ಮ ಸಾಲೆಯ "ರತ್ನತ್ರಯ" ಗಳೆಂದು ಕರೆಯುತ್ತಿದ್ದರು. ಅವರಲ್ಲಿ ಜೀವದ ಗೆಳೆತನ. ಅವರು ದಾರಿಯಲ್ಲಿಯ ಒಂದು ಮರದಡಿಯಲ್ಲಿ ಕೂಡಿ ಮುಂದೆ ಜೊತೆಯಾಗಿಯೇ ಸಾಲೆಗೆ ಹೋಗದ ದಿನ ಒಂದೂ ಇರಲಿಲ್ಲ. ಮೂವರ ಮನೆಗಳೂ ಹುಗಳಿಯ ಪಶ್ಚಿಮಕ್ಕಿದ್ದವು. ಜಗದೀಶ ಸರಸ್ವತೀ ಪೂಲಿನಿಂದ ಆಚೆಗಿರುವ ಊರಿನಿಂದ ಬರುವಾತ. ವಸವೀರ ಹಾಗೂ ರಾಸಬಿಹಾರಿಯವರು ಕೃಷ್ಣ ಹಾಗೂ ರಾಧಾಪುರದಿಂದ ಬರುತ್ತಿದ್ದರು. ಅವೆರಡೂ ಒಂದಕ್ಕೊಂದು ಹೊಂದಿದ್ದವು. ಜಗದೀಶ ಅವರಲ್ಲೆಲ್ಲ ಬುದ್ಧಿವಂತ; ಅಷ್ಟೇ ಬಡವ. ಆತನ ತಂದೆ ವೈದಿಕ. ಪೌರೋಹಿತ್ಯ ಸಾಗಿಸಿ, ಮದುವೆ ಮುಂಜೆ ಮಾಡಿಸಿದರೇ ಉಪಜೀವನ. ವಸವೀರ ಬಾಯಲ್ಲಿ ಬೆಳ್ಳಿಯ ಸವಟನ್ನಿಟ್ಟುಕೊಂಡು ಬಾಲ್ಯ ಕಳೆದವ. ಜನವೆಲ್ಲ ಅವನ ತಂದೆಗೆ ಕೃಷ್ಣಪುರದ ಜಮೀನದಾರನೆಂದೇ ಕರೆಯುತ್ತಿದ್ದರು. ರಾಸಬಿಹಾರಿಗೆ ತಿನ್ನುಣ್ಣಲು ಯಾವ ಕೊರತೆಯೂ ಇರಲಿಲ್ಲ. ಹಳ್ಳಿಯೂರಲ್ಲಿ ನಿರಾತಂಕವಾಗಿ ಜೀವನ ಸಾಗಿಸಲು ಎಷ್ಟು ಬೇಕೋ ಅಷ್ಟು ಆಸ್ತಿ ಪಾಸ್ತಿ ಹೊಲಮನೆ ಎಲ್ಲ ಇತ್ತು. ಹೀಗಿದ್ದರೂ ಆ ಹುಡುಗರು ಊರಲ್ಲೊಂದು ಬಾಡಿಗೆಯ ಮನೆಯನ್ನು ಹಿಡಿಯದೆ, ಕಾಲಾನುಕ್ರಮದಂತೆ ಬರುವ ಚಳಿಗಾಳಿ, ಬಿಸಿಲು, ಮಳೆಯೆನ್ನದೆ ದಾರಿಯುದ್ದಕ್ಕೂ ನಡೆದೇ ಬರುವುದಕ್ಕೆ ಒಂದು ಕಾರಣವಿತ್ತು. ಅವರು ತಾಯ್ತಂದೆಗಳಿಗೆ ಇಷ್ಟು ನಡೆದು ಹೋಗುವುದೆಂದರೆ ಅದೇನೂ ಕಷ್ಟವಲ್ಲವೆಂದೇ ಭಾವನೆ. ಇಷ್ಟೇ ಅಲ್ಲ; ಇಷ್ಟು ಕಷ್ಟಪಟ್ಟ ಹೊರತು ಸರಸ್ವತಿ

ದೇವಿಯೊಾದರೂ ಹೇಗೆ ಒಲಿದಾಳು ? ಎಂಬುವೇ ಅವರ ಕಲ್ಪನೆ. ಅಂತೂ ಏನೇ ಇರಲಿ; ಆ ಮೂವರು ಎಂಟ್ರೆನ್ಸಿನ ವರೆಗೆ ಇದೇ ರೀತಿ ಕಲಿತರು.

ಮರದಡಿಯಲ್ಲಿ ಕೂತು ಆ ಮರದ ಸಾಕ್ಷಿಯಾಗಿ ಅವರು ತಮ್ಮ ಮುಂದಿನ ಜೀವನದಲ್ಲಿ ಒಬ್ಬರನ್ನೊಬ್ಬರು ಎಂದೂ ಅಗಲಲಿಕ್ಕಿಲ್ಲ, ಮದುವೆ ಯನ್ನೆಂದೂ ಆಗಲಿಕ್ಕಿಲ್ಲ, ವಕೀಲರಾಗಿ ಒಂದೇ ಮನೆಯಲ್ಲಿದ್ದು, ದುಡಿದ ದ್ದನ್ನೆಲ್ಲ ಒಂದೇ ಪೆಟ್ಟಿಗೆಯಲ್ಲಿ ಕೂಡಹಾಕಿ ಅವನ್ನೆಲ್ಲ ದೇಶಕಾರ್ಯಕ್ಕಾಗಿ ಅರ್ಪಿಸುವೆವು— ಎಂದು ಪ್ರತಿಜ್ಞೆ ಮಾಡುತ್ತಿದ್ದರು.

ಇದಂತೂ ಬಾಲ್ಯದ ಕಲ್ಪನೆಯಾಯಿತು. ಆದರೆ ಈಗ ಹೇಳುತ್ತಿರು ವುದು ಕಲ್ಪನಾ ಸಾಮ್ರಾಜ್ಯದ ಮಾತಲ್ಲ; ಸತ್ಯ ಸಂಗತಿ. ಅವರ ವಿಚಾರ ಕಾರ್ಯರೂಪದಲ್ಲಿಳಿದ ಪರಿ ಸಂಕ್ಷೇಪವಾಗಿ ವಿವರಿಸಲಾಗಿದೆ.

ಮಿತ್ರತ್ವದ ಬಂಧನ ಜುನಿಯರ್ ಬಿ.ಎ. ದಲ್ಲಿರುವಾಗಲೇ ಶಿಥಿಲವಾಗ ಹತ್ತಿತು. ಆಗ ಕಲಕತ್ತೆಯಲ್ಲಿ ಕೇಶವ ಸೇನನ ಪ್ರಚಂಡ ಪ್ರಭುತ್ವ- ವ್ಯಾಖ್ಯಾನಗಳ ಸುರಿಮಳೆ. ಆ ಪ್ರವಾಹದಲ್ಲಿ ಹಳ್ಳಿಯ ಈ ಮೂರೂ ಹುಡುಗರು ಕಾಲೂರಿ ನಿಲ್ಲಲು ಸಮರ್ಥರಾಗಲಿಲ್ಲ— ಕೊಚ್ಚಿಕೊಂಡೇ ಹೋದರು. ಹರಿದು ಹೋಗುವುದೇನೋ ನಿಜ. ಆದರೆ ವನವೀರ ರಾಸ ಬಿಹಾರಿಯವರು ಪ್ರತ್ಯಕ್ಷವಾಗಿ ದೀಕ್ಷೆ ತೆಗೆದುಕೊಂಡು ಬ್ರಾಹ್ಮ ಸಮಾಜದಲ್ಲಿ ಸೇರಿದಂತೆ ಜಗದೀಶನಿಂದಾಗಲಿಲ್ಲ. ಆತ ಗೊಂದಲದಲ್ಲಿ ಬಿದ್ದ. ಮೂವರಲ್ಲಿ ಆತನೇ ಜಾಣನಾದುದು ನಿಜವಾದರೂ ಆತನಿಗೆ ಅಷ್ಟು ಧೈರ್ಯವಿರಲಿಲ್ಲ. ಇಷ್ಟೇ ಅಲ್ಲದೆ, ಆತನ ತಂದೆಯೂ ಆಗ ಜೀವಿಸಿದ್ದ. ಉಳಿದಿಬ್ಬರಿಗೆ ಈ ತೊಂದರೆ ಇರಲಿಲ್ಲ. ಕೆಲದಿನ ಮುಂಚಿತವಾಗಿ ತಂದೆ ತೀರಿದ್ದರಿಂದವ ವೀರನು ಕೃಷ್ಣಪುರದ ಜಮೀನದಾರನಾಗಿದ್ದ. ರಾಸಬಿಹಾರಿಯಂತೂ ಕೇಳುವುದೇ ಬೇಡ. ರಾಧಾಪುರದ ಎಲ್ಲ ಆಸ್ತಿಪಾಸ್ತಿಗಳಿಗೂ ಅವನೇ ಸರ್ವಾಧಿಕಾರಿ. ಆದುದರಿಂದ ಅವರು ಕೆಲ ದಿನಗಳಲ್ಲಿಯೇ ಬ್ರಾಹ್ಮ ಸಮಾಜದ ಕಲಿತ ಹೆಣ್ಣು ಮದುವೆಯಾಗಿ ಬಂದರು. ಆದರೆ ಬಡ ಜಗದೀಶನಿಗೆ ಹೀಗೆ ಮಾಡಲು ಅನುವಾಗಲಿಲ್ಲ. ಆತ ಸಕಾಲದಲ್ಲಿ ವಕೀಲಿ ಪಾಸಾಗಿ, ಹನ್ನೊಂದು ವರ್ಷದ ಹುಡುಗಿಯೊಬ್ಬಳನ್ನು ಮದುವೆಯಾಗಿ ಸಂಪಾದನೆಗಾಗಿ ಅಲಹಾ

ಬಾದಿಗೆ ಹೋದ. ಉಳಿದ ಇಬ್ಬರು ಕಲಕತ್ತೆಯಲ್ಲಿ ಯಾವುದನ್ನು ಎಷ್ಟು ಸುಲಭವೆಂದು ಭಾವಿಸಿದ್ದರೋ, ಅದು ಹಳ್ಳಿಗೆ ಬಂದೊಡನೆ ಅಷ್ಟೇ ತೊಂದರೆಗಿಟ್ಟಿತು. ಸೊಸೆಯಂದಿರು ಮಾವನ ಮನೆಯಲ್ಲಿ ಬುರಖೆ ಹಾಕುವದಿಲ್ಲ. ಜೋಡು ಮೆಟ್ಟಿ ಬೀದಿಯಲ್ಲಿ ಅಡ್ಡಾಡುತ್ತಾರೆ-- ಎಂಬುದು ಹಳ್ಳಿಯವರಿಗೆ ಸೋಜಿಗದ ಸಂಗತಿಯಾದುದರಿಂದ ದಿನಾಲು ಜನರು ಗುಂಪುಗುಂಪಾಗಿ ಈ ತಮಾಷೆಯನ್ನು ನೋಡಲು ಬರುತ್ತಿದ್ದರು. ಊರ ತುಂಬ ಕಿವಿಯಲ್ಲಿ ಕೇಳಲಿಕ್ಕಾಗದಷ್ಟು ಮಾತನ್ನು ಅಲ್ಲಿ ಇಲ್ಲಿ ಎಲ್ಲೆಡೆಯಲ್ಲಿಯೂ ಜನ ಆಡಿಕೊಳ್ಳುತ್ತಿದ್ದುದರಿಂದ ಉಪಾಯವಿಲ್ಲದೆ ಅಲ್ಲಿರಬೇಕೇ ಹೊರತು ಇವರಿಗೆ ತಮ್ಮ ಹೆಂಡಂದಿರೊಡನೆ ವಾಸಿಸುವುದು ಸಾಧ್ಯವಾಗಲಿಲ್ಲ. ವನವೀರ ಉಪಾಯಗಾರ. ಆದುದರಿಂದ ಆತ ಹಳ್ಳಿಯನ್ನು ಬಿಟ್ಟು ಕಲಕತ್ತೆಯಲ್ಲಿ ಬಂದು ಇರಹತ್ತಿದ. ಕೇವಲ ಜ್ಞಾನವೊಂದನ್ನೇ ಅವಲಂಬಿಸಿರದೆ ವ್ಯಾಪಾರವನ್ನೂ ಮಾಡಹತ್ತಿದ. ಆದರೆ [illegible]ಹಾರಿಯು ಉತ್ಪನ್ನ ಅಷ್ಟಕ್ಕಷ್ಟೇ ಇದ್ದುದರಿಂದ ನಿರುಪಾಯನಾಗಿ ಪಾಲಿಗೆ ಬಂದದ್ದೇ ಪಂಚಾಮೃತವೆಂದು ಬಗೆದು ಬಂದ ಕಷ್ಟವನ್ನೆಲ್ಲ ಇದುರಿಸಲು ಸಿದ್ಧನಾಗಿ ಊರಲ್ಲಿ ಜನರಿಂದ ಬಹಿಷ್ಕೃತನಾಗಿ ಮನೆಯಲ್ಲಿಯೇ ಉಳಿದ.

ಈ ರೀತಿಯಿಂದ ಆ ಮೂವರು ಗೆಳೆಯರಲ್ಲಿ ಒಬ್ಬ ಅಲಾಹಾಬಾದಿನಲ್ಲಿಯೂ ಇನ್ನೊಬ್ಬ ರಾಧಾಪುರದಲ್ಲಿಯೂ ಮಗದೊಬ್ಬ ಕಲಕತ್ತೆಯಲ್ಲಿಯೂ ವಾಸಿಸುತ್ತಿದ್ದಾರೆ. ಹೀಗಾಗಿ ಆಜನ್ಮ ಬ್ರಹ್ಮಚಾರಿಯಾಗಿ ಒಂದೇ ಮನೆಯಲ್ಲಿ ಉಳಿದು— ಒಂದೇ ಪೆಟ್ಟಿಗೆಯಲ್ಲಿ ಹಣ ಕೂಡಹಾಕಿ ದೇಶಸೇವೆ ಮಾಡಬೇಕೆಂಬ ಪ್ರತಿಜ್ಞೆ ಪೂರೈಸಲಿಲ್ಲ. ಇವರ ಪ್ರತಿಜ್ಞೆಗೆ ಸಾಕ್ಷಿಯಾಗಿದ್ದ ಆ ಒಣಗಿದ ವೃಕ್ಷ ಯಾರ ಮೇಲೆಯೂ ತಪ್ಪು ಹೊರಿಸದೆ ತನ್ನೊಳಗೇ ನಗುತ್ತ ನಿಂತಿದೆ. ಇದೇ ರೀತಿ ಬಹಳ ದಿನ ಕಳೆಯಿತು. ಈನಡುವೆ ಅವರಲ್ಲಿ ಒಂದೆರಡು ಸಲ ಭೆಟ್ಟಿಯಾಗಿದ್ದರೂ ಆಗಿರಬಹುದು. ಆದರೂ ಬಾಲ್ಯಕಾಲದ ಸ್ನೇಹ ಒಮ್ಮೆಗೇ ಇಂಗಲಿಲ್ಲ. ಜಗದೀಶನಿಗೆ ಮಗನು ಹುಟ್ಟಿದಾಗ ಈ ಸುವಾರ್ತೆಯನ್ನು ಆತನು ಮನವೀರನಿಗೆ ತಿಳಿಸುತ್ತ ಹೀಗೆ ಬರೆದ— " ಒಂದಾನುವೇಳೆ ನಿನಗೆ ಹುಡುಗಿ ಹುಟ್ಟಿದರೆ ಆಕೆಯನ್ನು ಸೊಸೆ

ಯನ್ನಾಗಿ ನನ್ನ ಮನೆಗೆ ತಂದು, ಬಾಲ್ಯದಲ್ಲಿ ಮಾಡಿದ ಪಾಪಕ್ಕೆ ಕೆಲಮಟ್ಟಿ
ಗಾದರೂ ಪ್ರಾಯಶ್ಚಿತ್ತ ಕೊಂಡಿರುವೆ. ನಿನ್ನ ದಯೆಯಿಂದಲೇ ನಾನು ವಕೀ
ಲನಿರುವೆನೆಂಬುದನ್ನು ಎಂದೂ ಮರೆಯೆನು."

ವನವೀರನು ಅದಕ್ಕೆ ಮಾರೋಲೆ ಬರೆದ. 'ಸಂತೋಷವಾಯಿತು.
ನಿನ್ನ ಮಗನು ದೀರ್ಘಾಯುವಾಗಲೆಂದು ಹಾರೈಸುವೆ. ಆದರೆ ನನಗೆ
ಹುಡುಗಿ ಹುಟ್ಟುವ ಸಂಭವವಿದ್ದಂತೆ ತೋರುವದಿಲ್ಲ. ಆದರೂ ದೇವರ
ದಯೆಯಿಂದ ಎಂದಾದರೊಮ್ಮೆ ಹುಟ್ಟಿದರೆ ನಿನ್ನ ಮಗನಿಗೇ ಕೊಡುವೆ.'
ಹೀಗೆ ಪತ್ರ ಬರೆದು ತನ್ನ ಮನಸ್ಸಿನಲ್ಲಿಯೇ ನಕ್ಕ. ಯಾಕೆಂದರೆ ಎರಡು
ವರ್ಷದ ಹಿಂದೆ ಇನ್ನೊಬ್ಬ ಮಿತ್ರ ರಾಸಬಿಹಾರಿಗೂ ಮಗ ಹುಟ್ಟಿದಾಗ, ಆತ
ಇದೇ ರೀತಿ ಪ್ರಾರ್ಥಿಸಿದ್ದ. ಇಂದಿಗೆ ಆತ ವ್ಯಾಪಾರದಿಂದಾಗಿ ದೊಡ್ಡ
ಶ್ರೀಮಂತಿಕೆ ನಡೆಸಿದ್ದ. ಆದುದರಿಂದ ಆತನ ಮಗಳನ್ನು ಎಲ್ಲರೂ ಸೊಸೆ
ಯನ್ನಾಗಿ ಬಯಸಿದುದರಲ್ಲೇನಾಶ್ಚರ್ಯ ?

೨

ಇದೇನು ೫-೬ ತಿಂಗಳ ನಂತರದ ಸುದ್ದಿಯಲ್ಲ. ೨೫ ವರ್ಷ ನಂತ
ರದ ಕತೆ ಬರೆಯುತ್ತಿದ್ದೇನೆ. ವನವೀರ ಈಗ ಮುದುಕ. ಕಳೆದ ಎಷ್ಟೋ
ವರ್ಷಗಳಿಂದ ರೋಗ ತಿಂದು ತಿಂದು ಹಾಸಿಗೆಯ ಮೇಲೆಯೇ ಬಿದ್ದಿರು
ತ್ತಾನೆ. ಇನ್ನು ಏಳುವುದು ಬಹಳ ಕಠಿಣವೆಂದು ಆತನಿಗೆ ಅನಿಸಹತ್ತಿದೆ.
ಎಂದಿನಿಂದಲೂ ಆತ ಪಾಪಭೀರು; ಅಲ್ಲದೆ ದೈವಭಕ್ತ. ಸಾವಿಗೆ ಆತ
ಅಂಜುವವನಲ್ಲ. 'ಆದರೆ ಇದ್ದ ಒಬ್ಬಳೇ ಒಬ್ಬ ಮಗಳಾದ ವಿಜಯೆಯ
ಲಗ್ನವೊಂದನ್ನು ಮಾಡಿಹೋಗಲು ಸಮಯ ಸಿಗಲಿಲ್ಲವಲ್ಲ' ಎಂಬುದೊಂದೇ
ದುಃಖ. ಆ ದಿನ ಸುಮಾರು ಮೂರು ತಾಸು ಹೊತ್ತಿರುವಾಗ ಒಮ್ಮೆಲೇ
ವಿಜಯೆಯ ಕೈ ಹಿಡಿದು 'ಮಗೂ, ನನಗೆ ಗಂಡುಮಕ್ಕಳಿಲ್ಲವೆಂದು ನಾನು
ಸ್ವಲ್ಪವೂ ವ್ಯಥೆ ಪಡುವದಿಲ್ಲ, ನೀನೇ ನನ್ನ ಸರ್ವಸ್ವ. ಈಗ ನಿನಗಿನ್ನೂ
ಹದಿನೆಂಟು ತುಂಬಿರದಿದ್ದರೂ, ನಿನ್ನ ಮೇಲೆ ಈ ಎಲ್ಲ ಐಶ್ವರ್ಯದ ಹೊರೆ
ಯನ್ನು ಬಿಟ್ಟು ಹೋಗಲು ನನಗೆ ತಿಲಮಾತ್ರವೂ ಅಂಜಿಕೆ ಎನಿಸದು.
ನಿನಗೆ ತಾಯಿ ಇಲ್ಲ, ಅಣ್ಣ ತಮ್ಮಂದಿರಿಲ್ಲ. ಮುದುಕ ಚಿಗಪ್ಪ, ದೊಡ್ಡಪ್ಪ

ಎನ್ನುವವರು ಸಹ ಇಲ್ಲ. ಇದನ್ನೆಲ್ಲ ನಾನು ಬಲ್ಲೆನಾದರೂ ನನ್ನ ಸಂಪತ್ತಿನ ಬಗ್ಗೆ ಅಧೈರ್ಯಪಡುವದಿಲ್ಲ. ಮಗೂ, ನಿನ್ನಲ್ಲಿ ಒಂದೇ ಒಂದು ಬೇಡಿಕೆಯಿದೆ. ಜಗದೀಶ ಏನೇ ಮಾಡಲಿ, 'ಎಂತಹನೇ ಇರಲಿ, ಅವ ನನ್ನ ಬಾಲ್ಯಮಿತ್ರ. ಸಾಲಕ್ಕಾಗಿ ಅವನ ಮನೆ ಮಠ ಮಾತ್ರ ಮಾರಿಸಬೇಡ. ಅವನಿಗೊಬ್ಬ ಮಗನಿರುವ. ಅವನನ್ನು ನಾನು ಕಣ್ಣಿಂದೇನೂ ನೋಡಿಲ್ಲವಾದರೂ ಅವನು ಸದ್ಗುಣಿಯೆಂದು ಕೇಳಿದ್ದೇನೆ. ತಂದೆಯ ತಪ್ಪಿಗಾಗಿ ಮಗನ ಬಾಯಿ ಹೊಡೆಯಬೇಡ. ಇದೇ ನನ್ನ ಕೊನೆಯ ಬೇಡಿಕೆ' ಎಂದ.

ವಿಜಯೆಯು ಅಳುತ್ತ ಕುತ್ತಿಗೆ ತುಂಬಿ ಬಂದು "ಅಪ್ಪಾ, ನಿನ್ನ ಅಪ್ಪಣೆಯನ್ನು ನಾನು ಎಂದಿಗೂ ಮೀರೆನು. ಜಗದೀಶ ಬಾಬುವು ಬದುಕಿರುವಷ್ಟು ದಿನ ಆತನನ್ನು ನಿನ್ನಂತೆಯೇ ನೋಡಿಕೊಳ್ಳುವೆನು. ಆದರೆ ಆತ ತೀರಿದ ಬಳಿಕ ಸುಮ್ಮನೆ ಇಷ್ಟೊಂದು ಸಂಪತ್ತನ್ನು ಆತನ ಮಗನಿಗೇಕೆ ಬಿಟ್ಟುಬಿಡಲಿ ? ನೀನೂ ಅವನನ್ನು ನಿನ್ನ ಕಣ್ಣಿಂದ ಕಂಡಿಲ್ಲ. ನಾನೂ ನೋಡಿಲ್ಲ. ಅವನು ನಿಜವಾಗಿಯೂ ಕಲಿತವನಾಗಿದ್ದರೆ ಸಹಜವಾಗಿಯೇ ತನ್ನ ತಂದೆಯ ಸಾಲವನ್ನು ದುಡಿದು ತೀರಿಸಬಹುದು" ಎಂದಳು.

ಮಗಳೆಡೆಗೆ ದೃಷ್ಟಿಹಾಯಿಸಿದ. "ಮಗೂ, ಸಾಲವಾದರೂ ಕಡಿಮೆ ಇಲ್ಲ. ಎಷ್ಟಾದರೂ ಹುಡುಗ, ಒಂದು ವೇಳೆ ತೀರಿಸಲಾಗದಿದ್ದರೆ ?"

"ತಂದೆಯ ಸಾಲ ತೀರಿಸಲಾಗದವನು ಕುಪುತ್ರನೆಂದೇ ಭಾವಿಸಬೇಕಾದೀತು. ಅಂತಹನಿಗೆ ಸಹಾಯ ಮಾಡುವದು ಎಂದಿಗೂ ಉಚಿತವಲ್ಲ."

ವನವೀರನು ತನ್ನ ತೇಜಸ್ವಿಯಾದ ಕಲಿತ ಕನ್ನಿಕೆಯ ಗುಣಸ್ವಭಾವ ಅರಿತಿದ್ದ. ಅದಕ್ಕಾಗಿ ಆತ ಹೆಚ್ಚಿಗೆ ತರ್ಕ ವಿತರ್ಕ ಮಾಡಲಿಲ್ಲ. ದೊಡ್ಡದಾಗಿ ಒಮ್ಮೆ ನಿಟ್ಟುಸಿರೆಳೆದು ಹೇಳಿದ "ಮಗಳೇ ದೇವರು ಸರ್ವಸಾಕ್ಷಿಯೆಂದು ನಂಬಿ, ಯೋಗ್ಯವಾದುದನ್ನೇ ಮಾಡುತ್ತ ಹೋಗು. ನಾನು ನಿನಗೆ ಹೆಚ್ಚು ಹೇಳಿ ಕೈಕಟ್ಟಿದಂತೆ ಮಾಡಿ ಹೋಗಲು ಬಯಸುವದಿಲ್ಲ."

ತುಸು ಹೊತ್ತಿನ ನಂತರ ಪುನಃ ಉಸಿರೆಳೆದು "ಮಗೂ, ಈ ಜಗದೀಶ ಮನುಷ್ಯನೆಂದು ಕರೆಯಿಸಿಕೊಳ್ಳಲು ಯೋಗ್ಯನಿದ್ದಾಗ— ನೀನು ಹುಟ್ಟುವು

ದಕ್ಕಿಂತ ಮುಂಚಿತವಾಗಿಯೇ ತನ್ನ ಮಗನಿಗಾಗಿ ನಿನ್ನನ್ನು ಬೇಡಿದ್ದ. ಮಗೂ, ಅದಕ್ಕೆ ನಾನೂ ಒಪ್ಪಿದ್ದೆ '' ಎಂದು ಹೇಳಿ ಆತನು ಕುತೂಹಲದಿಂದ ಆಕೆಯ ಕಡೆ ನೋಡಿದ.

ವನವೀರನ ಈ ಹುಡುಗಿ ಬಾಲ್ಯದಿಂದಲೇ ಮಾತೃವಿಹೀನೆ. ಆತನೇ ಆಕೆಯ ತಂದೆ ತಾಯಿ ಎರಡೂ ಆಗಿದ್ದ. ಆದುದರಿಂದ ವಿಜಯೆಯು ತಂದೆಯೊಡನೆ ತಾಯಿಯಂತೆ ಅಕ್ಕರೆಯಿಂದ ನಡೆದುಕೊಳ್ಳಲು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಆಕೆ '' ಅಪ್ಪಾ ಅದನ್ನು ನೀನು ಮನಸ್ಸಿನಿಂದ ಹೇಳಿರ ಲಿಕ್ಕಿಲ್ಲ, ಬಾಯಿಪೂರ್ತ ಹೇಳಿರಬೇಕು " ಎಂದಳು.

" ಯಾಕೆ ಮಗೂ ? "

" ಮನಸಾ ಹೇಳಿದುದಾದರೆ ಒಮ್ಮೆಯಾದರೂ ಆತನನ್ನು ನೋಡಲು ನಿಮ್ಮ ಮನಸ್ಸು ತವಕಿಸುತ್ತಿತ್ತಲ್ಲವೇ ? ''

" ಆತ ತನ್ನ ತಾಯಿಯಂತೆಯೇ ಸೊರಗಿದ್ದಾನೆ. ಆತ ಬಹುಕಾಲ ಬದುಕಲಾರನೆಂದು ವೈದ್ಯರೆಲ್ಲ ಅಭಿಪ್ರಾಯಪಟ್ಟಿದ್ದಾರೆಂದು ರಾಸಬಿಹಾರಿಯ ಬಾಯಿಂದ ಕೇಳಿದ್ದೆ. ಅದಕ್ಕಾಗಿ ಆತನು ಹತ್ತಿರದಲ್ಲಿಯೇ ಇದ್ದರೂ ಅವ ನನ್ನು ಕರೆಸಿ ನೋಡಲು ನಾನು ಬಯಸಲಿಲ್ಲ. ಇದೇ ಕಲಕತ್ತೆಯ ಯಾ ವುದೋ— ಗಲ್ಲಿಯಲ್ಲಿದ್ದು ಆಗ ಆತ ಬಿ. ಎ. ಗೆ ಓದುತ್ತಿದ್ದ ಅದರ ನಂತರ ನನ್ನ ಅಸ್ವಸ್ಥತೆಯಿಂದಾಗಿ ಆ ಬಗ್ಗೆ ನಾನು ವಿಚಾರವನ್ನೇ ಮಾಡಿರಲಿಲ್ಲ. ಮಗೂ, ನಿನ್ನ ಹತ್ತರ ನಾನು ಸುಳ್ಳೆಂದೂ ಹೇಳುವದಿಲ್ಲ.— ನಾನು ಜಗ ದೀಶನಿಗೆ ನಿನ್ನ ಬಗ್ಗೆ ಮನಸಾ ಮಾತು ಕೊಟ್ಟಿದ್ದೆ. '' ನಂತರ ತುಸು ತಡೆದು ಪುನಃ ಮುಂದರಿಸಿದ. " ಈ ಹೊತ್ತು ಜಗದೀಶನೊಬ್ಬ ವ್ಯಸನಿ, ಜುಗಾರಿ, ನಿರುಪಯೋಗಿಯೆಂದು ಎಲ್ಲರೂ ತಿಳಿದಿದ್ದಾರೆ. ಆದರೂ ಇದೇ ಜಗದೀಶ ಒಂದು ಕಾಲದಲ್ಲಿ ನಮ್ಮೆಲ್ಲರನ್ನೂ ಮೀರಿದ್ದ. ವಿದ್ಯಾಬುದ್ಧಿಯಿಂ ದಷ್ಟೇ ಎಂದು ಭಾವಿಸಬೇಡ— ಅದು ಎಲ್ಲರಲ್ಲಿಯೂ ಇದ್ದೇ ಇದೆ. ಆದರೆ ಜೀವಕ್ಕೆ ಜೀವಕೊಟ್ಟು ಆತನಂತೆ ಪ್ರೀತಿಸುವವರನ್ನು ನಾನು ಎಲ್ಲಿಯೂ ಕಂಡಿಲ್ಲ. ಆತನಲ್ಲಿಯೂ ದೋಷವಿಲ್ಲೆಂದು ನಾನು ಅನ್ನುವದಿಲ್ಲ. ಆದರೆ ಹೆಂಡತಿಯ ಮೃತ್ಯುವಾದಾಗ ಆತ ದುಃಖವಿಹ್ವಲನಾದುದನ್ನು ನೆನಸಿ

ಕೊಂಡರೆ ಮಗೂ-ನಿನ್ನ ತೀರಿದ ತಾಯಿಯ ನೆನಪಾಗಿ ನಾನು ಆತನನ್ನು ಮನ ದಲ್ಲಿಯೇ ಗೌರವಿಸುತ್ತೇನೆ. ಆತನ ಹೆಂಡತಿ ಸಾಕ್ಷಾತ್ ಲಕ್ಷ್ಮಿಯಾಗಿದ್ದಳು. ಆಕೆ ಸಾಯುವ ಮುನ್ನ ಮಗನನ್ನು ಕರೆದು ಇಷ್ಟೇ ಹೇಳಿದಳು- 'ನರೇಂದ್ರಾ, ದೇವರಲ್ಲಿ ನಿನಗೆ ಅಚಲ ವಿಶ್ವಾಸವಿರಲಿ, ಇದೇ ನನ್ನ ಆಶೀರ್ವಾದ.' ಆಕೆಯ ಅಂತಿಮ ಆಶೀರ್ವಾದ ನಿಷ್ಫಲವಾಗಲಿಲ್ಲವೆಂದು ಈಗ ಕೇಳಿರುವೆ, ನರೇಂದ್ರನು ಈ ವಯಸ್ಸಿನಲ್ಲಿಯೇ ದೇವರನ್ನು ತನ್ನ ತಾಯಿಯಂತೆಯೇ ಪ್ರೀತಿಸಲು ಕಲಿತುಬಿಟ್ಟಿದ್ದಾನೆ. ಇದನ್ನು ಕಲಿತವನಿಗೆ ಜಗತ್ತಿನಲ್ಲಿ ಇನ್ನಾವ ಕೊರತೆಯೂ ಇರಲಾರದು ಮಗೂ."

"ಅಪ್ಪಾ, ಜಗತ್ತಿನಲ್ಲಿ ಇದೇ ಅಮೂಲ್ಯವಾದುದೇನು?"

ಮರಣೋನ್ಮುಖ ಮುದುಕನ ನಿಸ್ತೇಜ ಕಣ್ಣುಗಳು ಅಶ್ರುಪೂರಿತವಾದುವು. ಒಮ್ಮೆಂದೊಮ್ಮೆ ಎರಡೂ ಕೈಗಳನ್ನು ಮುಂದೆ ಮಾಡಿ ಮಗಳನ್ನು ಎದೆಗವಚಿ ನುಡಿದ "ಹೌದು, ಮಗೂ, ಜಗತ್ತಿನಲ್ಲಿ ಇದನ್ನು ಪಡೆಯುವದೇ ದುಸ್ತರವಾದದ್ದು. ಜಗತ್ತಿನ ಒಳಗೆ— ಜಗತ್ತಿನ ಹೊರಗೆ ಇಷ್ಟೇ ಏಕೆ? ಇಡೀ ಬ್ರಹ್ಮಾಂಡದಲ್ಲಿಯೇ ಇಂತಹ ವಸ್ತು ಇನ್ನೊಂದಿಲ್ಲ. ನೀನೇ ಸ್ವತಃ ಇದನ್ನು ಹೊಂದುವೆಯೋ ಇಲ್ಲವೋ, ಆದರೂ ಹೊಂದಿದವರ ಚರಣಕಮಲಗಳ ಬಳಿ ಮಸ್ತಕವನ್ನಿಡುವ ಭಾಗ್ಯವಾದರೂ ನಿನಗೆ ಬರಲಿ— ಇದೇ ನನ್ನ ಕೊನೆಯ ಆಶೀರ್ವಾದ."

ಆದಿನ ವಿಜಯೆಯ ಮನಸ್ಸಿನಲ್ಲಿ, ತಂದೆಯ ಹೃದಯದಾಳದಿಂದ ಯಾರೋ ತುಂಬ ಮಧುರ ಹಾಗೂ ಉಜ್ವಲವಾದ ದೃಷ್ಟಿಯಿಂದ ತನ್ನ ಹೃದಯದ ಆಳವಾದ ಅಂತಸ್ಥಲವನ್ನು ಪ್ರೀತಿಯಿಂದ ದಿಟ್ಟಿಸಿ ನೋಡುತ್ತಿರುವಂತೆ ಭಾಸವಾಯಿತು. ಈ ಅಭೂತಪೂರ್ವವೂ, ಆಶ್ಚರ್ಯಪ್ರದವೂ ಆದ ಅನುಭೂತಿಯ ರಸನಿಮಿಷದಲ್ಲಿ ಆಕೆ ಮಿಂದೆದ್ದಳು. ವನವೀರನೆಂದ "ಆತನ ಹೆಸರು ನರೇಂದ್ರ, ಅವನು ಡಾಕ್ಟರನಾಗಿದ್ದಾನೆಂದು ಅವನ ತಂದೆಯಿಂದ ಕೇಳಿರುವೆ. ಆದರೂ ಆತ ಆ ವೃತ್ತಿಯನ್ನು ಮಾಡುತ್ತಿಲ್ಲವಂತೆ. ಈಗ ಆತ ಇದೇ ದೇಶದಲ್ಲಿದ್ದರೆ ಒಮ್ಮೆ ಈಗಲೇ ಕರೆಸಿ ಕಣ್ಣುತುಂಬಾ ನೋಡಿಕೊಳ್ಳುತ್ತಿದ್ದೆ."

"ಹಾಗಾದರೆ ಈಗ ಆತನೆಲ್ಲಿರುವ?" ಎಂದು ವಿಜಯೆಯು ಪ್ರಶ್ನಿಸಿದಳು.

"ಬರ್ಮಾದಲ್ಲಿ ತನ್ನ ಮಾವನ ಜೊತೆಯಲ್ಲಿದ್ದಾನೆ. ಈಗ ಜಗದೀಶನ ಎಲ್ಲ ಮಾತನ್ನೂ ವಿವರವಾಗಿ ಹೇಳುವಷ್ಟು ಚೈತನ್ಯ ನನ್ನಲ್ಲಿರದಿದ್ದರೂ, ಆತನ ಬಾಯಿಂದ ಉದುರಿದ ಒಂದೆರಡು ಮಾತಿನಿಂದ ತಾಯಿಯ ಎಲ್ಲ ಸದ್ಗುಣಗಳನ್ನೂ ಪಡೆದಿರುವನೆಂದು ಮಾತ್ರ ಹೇಳಬಲ್ಲೆ. ಅವನು ಹೇಗೇ ಇರಲಿ. ಸುಖವಾಗಿ ಬಾಳುವಂತೆ—ಬೆಳಗುವಂತೆ ದೇವರು ಅನುಗ್ರಹಿಸಲಿ."

ಸಾಯಂಕಾಲವಾಗಿದ್ದಿತು. ದೀಪ ಹಚ್ಚಲು ಬಂದ ನೌಕರನು ವಿಲಾಸ ಬಾಬು ಬಂದಿದ್ದಾನೆಂದು ತಿಳಿಸಿದ. ಆಗ ವನವೀರನು "ಮಗೂ, ನೀನು ಕೆಳಗೆ ಹೋಗಬಹುದು. ನಾನು ತುಸು ವಿಶ್ರಮಿಸುವೆ" ಎಂದ.

ವಿಜಯೆಯು ತಂದೆಯ ತಲೆದಿಂಬನ್ನು ಸರಿಪಡಿಸಿ, ಶಾಲನ್ನು ಮೈತುಂಬ ಸರಿಯಾಗಿ ಹೊದ್ದಿಸಿ, ನೇರವಾಗಿ ಕಣ್ಣಿಗೆ ಬೀಳುತ್ತಿದ್ದ ಬೆಳಕನ್ನು ತುಸು ಮರೆಗೆ ಸರಿಸಿ, ಕೆಳಗೆ ಹೋದಳು. ತಂದೆಯ ಜೀರ್ಣಹೃದಯವನ್ನು ಭೇದಿಸಿ ನಿಟ್ಟುಸಿರೊಂದು ಹೊರಬಿದ್ದಿತು. ವಿಲಾಸನು ಬಂದ ಸುದ್ದಿ ಕೇಳಿ ಮಗಳ ಮೋರೆಯ ಮೇಲೆ ಕುಣಿದ ಆರಕ್ತಕಳೆಯೇ ಆತನ ಕೊರಗಿಗೆ ಕಾರಣವಾಗಿದ್ದಿತು.

ವಿಲಾಸಬಿಹಾರಿ ರಾಸಬಿಹಾರಿಯ ಮಗ. ಆತ ಕಲಕತ್ತೆಯಲ್ಲಿಯೇ ಬಹುದಿನಗಳಿಂದಲೂ ಕಾಲೇಜಿನಲ್ಲಿ ಓದುತ್ತಿದ್ದ. ಈಗ ಬಿ. ಎ. ದಲ್ಲಿರುವ. ವನವೀರ ಜಾತಿಯನ್ನು ತ್ಯಜಿಸಿದಂದಿನಿಂದ ಹೆಚ್ಚಾಗಿ ಊರಿಗೆ ಹೋಗುತ್ತಿರಲಿಲ್ಲ. ವ್ಯಾಪಾರದಲ್ಲಿ ಲಾಭವಾದಂತೆ ಊರಲ್ಲಿ ಬಹಳಷ್ಟು ಆಸ್ತಿ ಕೊಂಡಿದ್ದನಾದರೂ, ಅವೆಲ್ಲವುಗಳ ಮೇಲ್ವಿಚಾರಣೆಯನ್ನು ಆತನ ಬಾಲ್ಯಮಿತ್ರ ರಾಸಬಿಹಾರಿಯೇ ನೋಡಿಕೊಂಡಿದ್ದ. ಆ ಕಾರಣದಿಂದಾಗಿ ವಿಲಾಸ ಮೇಲಿಂದ ಮೇಲೆ ಇಲ್ಲಿಗೆ ಬರಹೋಗುತ್ತಿದ್ದ. ಆದರೆ ಕೆಲವೇ ದಿನಗಳಲ್ಲಿ ಅದಕ್ಕೇಕೆ ತಡೆಯುಂಟಾಯಿತೆಂಬುದು ಹಿಂದಿನಿಂದ ತಿಳಿಯುವದು.

ವನವೀರನು ಸ್ವರ್ಗಸ್ಥನಾಗಿ ಎರಡು ಹುಣ್ಣಿವೆ ಗತಿಸಿವೆ. ಆತನ ಕಲಕತ್ತೆಯ ಅಷ್ಟು ದೊಡ್ಡ ಮನೆಯಲ್ಲಿ ವಿಜಯೆ ಈಗ ಒಂಟಿಗಳಾಗಿದ್ದಾಳೆ.

ಊರಲ್ಲಿಯ ಆಕೆಯ ಜಮೀನಿನ ಮೇಲ್ವಿಚಾರಣೆಯನ್ನೆಲ್ಲ ರಾಸಬಿಹಾರಿಯೇ ನೋಡುತ್ತಿದ್ದ. ಈ ರೀತಿಯಿಂದ ಆತನೊಬ್ಬ ಹಿತೈಷಿ. ಆದರೆ ಆತ ಸ್ವತಃ ಹಳ್ಳಿಯಲ್ಲಿರುತ್ತಿದ್ದ ಮೂಲಕ ಆತನ ಮತ ವಿಲಾಸಬಿಹಾರಿಯ ಮೇಲೆಯೇ ವಿಜಯೆಯ ಸುಖದುಃಖದ ಭಾರವೆಲ್ಲ ಬಿದ್ದಂತಾಗಿದೆ. ನಿಜವಾಗಿ ನೋಡಿದರೆ ವಿಲಾಸಬಿಹಾರಿಯೇ ಮುಖ್ಯ ಹಿತಚಿಂತಕನಾಗಿದ್ದಾನೆ.

ಆ ದಿನಗಳಲ್ಲಿ ಪ್ರತಿಯೊಂದು ಬ್ರಹ್ಮ ಪರಿವಾರದಲ್ಲಿ ಸತ್ಯ, ಸುನೀತಿ, ಸುರುಚಿ ಇವನ್ನೆಲ್ಲ ವ್ಯಾಪಕಾರ್ಥದಿಂದ ಕಲಿಸಲಾಗುತ್ತಿತ್ತು. ಯಾಕಂದರೆ ಪರದೇಶದಲ್ಲಿ ಕಲಿತು ಬಂದ ಹಿಂದೂ ತರುಣರು ಹೆತ್ತವರ ವಿರುದ್ಧ, ದೇವಿ ದೇವತೆಗಳ ವಿರುದ್ಧ, ಹಾಗೂ ಸಮಾಜ ಸಂಪ್ರದಾಯದ ವಿರುದ್ಧ ವಿದ್ರೋಹ ಮಾಡಿ ಬ್ರಹ್ಮ ಸಮಾಜದ ರಜಿಸ್ಟರಿನಲ್ಲಿ ತಮ್ಮ ಹೆಸರು ಬರೆಯಿಸುತ್ತಿರುವದರಿಂದ ಬ್ರಹ್ಮಸಮಾಜದವರು ತಲೆಬಾಗಿಸದಂತೆ ಎತ್ತಿ ಹಿಡಿಯಲು ಈ ಶಬ್ದಗಳೇ ಸಹಾಯಕವೆಂದು ಅವರೆಲ್ಲರ ಭಾವನೆಯಾಗಿದ್ದಿತು. ಏನೇ ಆದರೂ ಸತ್ಯವೆನಿಸುವದನ್ನೇ ತಾವು ಮಾಡುತ್ತೇವೆಂದು ಅವರೆನ್ನುತ್ತಿದ್ದರು. ಬೇಕಾದರೆ ತಂದೆ ತೀರಲಿ, ತಾಯಿ ಆಳಲಿ,— ಅವಾವುದರ ಚಿಂತೆಯನ್ನೂ ಅವರು ಮಾಡುವಂತಿರಲಿಲ್ಲ. ಈ ಎಲ್ಲ ಮನೋ ದೌರ್ಬಲ್ಯಗಳನ್ನು ಎಷ್ಟೇ ಕಷ್ಟಬಂದರೂ ಲೆಕ್ಕಿಸದೆ ಮೀರಿನಿಂತ ಹೊರತು ಸತ್ಯದ— ಬೆಳಕಿನ ಸಾಕ್ಷಾತ್ಕಾರವಾಗುವಂತಿಲ್ಲ. ಈ ಎಲ್ಲ ಮಾತುಗಳನ್ನು ವಿಜಯೆಯೂ ಕಲಿತಿದ್ದಳು.

ಈ ಹೊತ್ತು ವಿಲಾಸಬಾಬುವು ವ್ಯಸನಿಯಾದ ಮುದಿ ಜಗದೀಶ ಸತ್ತ ವಾರ್ತೆ ತಂದಿದ್ದ. ಆತ ತನ್ನ ತಂದೆಯ ಮಿತ್ರನೆಂಬುದು ದಿಟವಾದರೂ ಜಗದೀಶನು ಹೆಂಡ ಕುಡಿದು ಎಚ್ಚರದಪ್ಪಿ ಮಾಳಿಗೆಯ ಮೇಲಿಂದ ಬಿದ್ದು ಸತ್ತನೆಂಬುದೆರ ವರ್ಣನೆಯನ್ನು ವಿಲಾಸಬಾಬುವಿನ ಬಾಯಿಂದ ಕೇಳಿ, ವಿಜಯೆಯು ಬ್ರಾಹ್ಮಧರ್ಮದ ಸುನೀತಿಯನ್ನು ಜ್ಞಾಪಿಸಿಕೊಂಡು ತಂದೆಯ ಈ ದುರ್ಭಾಗ್ಯ. ಮಿತ್ರನ ಬಗ್ಗೆ ತಿರಸ್ಕಾರದಿಂದ ಮೋರೆ ಮುರಿಯಲು ಸ್ವಲ್ಪವೂ ಕಡಿಮೆ ಮಾಡಲಿಲ್ಲ. ವಿಲಾಸನೇ ಮುಂದರಿಸಿದ. " ಜಗದೀಶ ಮುಖರ್ಜಿ ನನ್ನ ತಂದೆಗೂ ಬಾಲ್ಯ ಮಿತ್ರ. ಆದರೆ ಅವನು ಆತನ ಮೋರೆಯನ್ನು ಸಹ ನೋಡುತ್ತಿದ್ದಿಲ್ಲ. ಅವನೆರಡು ಸಲ ಸಾಲ ಕೇಳಲು ಬಂದಿದ್ದ. ನನ್ನ ತಂದೆ ಎರಡು ಬಾರಿಯೂ ಆತನನ್ನು ನೌಕರನಿಂದ ಹೆಬ್ಬಾ,

ಗಿಲ ಹೊರಗೆ ಹಾಕಿಸಿದ್ದ. ಇಂತಹ ಅನಾಚಾರಿಗಳಿಗೆ ಸಹಾಯ ಮಾಡು ವದೆಂದರೆ ಮಂಗಲಮಯ ಭಗವಂತನಲ್ಲಿ ಅಪರಾಧ ಮಾಡಿದಂತೆ ಎಂದು ಅವರು ಯಾವಾಗಲೂ ಅನ್ನುತ್ತಿರುತ್ತಾರೆ.

" ರೂಪಾಯಿಗೆ ಹದಿನಾರಾಣೆ ಸತ್ಯ" ಎಂದು ಅನುಮೋದಿಸಿ ವಿಜಯೆ ನುಡಿದಳು.

ವಿಲಾಸನು ಉತ್ಸಾಹಿತನಾಗಿ ವ್ಯಾಖ್ಯಾನ ಮಾಡುವವನಂತೆ ಹೇಳ ತೊಡಗಿದ: " ಮಿತ್ರನಾಗಲಿ, ಯಾರೇ ಆಗಲಿ, ದೌರ್ಬಲ್ಯವಶರಾಗಿ ಯಾವುದೇ ರೀತಿಯಿಂದ ಬ್ರಹ್ಮ ಸಮಾಜದ ಉಚ್ಚ ಆದರ್ಶಕ್ಕೆ ಚ್ಯುತಿಯನ್ನು ತರುವುದು ಉಚಿತವಲ್ಲ. ನ್ಯಾಯವಾಗಿ ಜಗದೀಶನ ಎಲ್ಲ ಆಸ್ತಿ ನಮ್ಮದೇ ಇದೆ. ಆತನ ಮಗ ತಂದೆಯ ಸಾಲ ತೀರಿಸಿದರಂತೂ ಒಳಿತಾಯಿತು. ಇಲ್ಲವಾದರೆ ಕಾನೂನಿನಂತೆ ಈ ಕ್ಷಣವೇ ಅವನ್ನೆಲ್ಲ ನಮ್ಮ ಸ್ವಾಧೀನ ಪಡಿಸಿಕೊಳ್ಳಲೇ ಬೇಕು. ವಿಚಾರ ಮಾಡಿ ನೋಡಿದರೆ ಎಲ್ಲವನ್ನೂ ಬಿಟ್ಟು ಕೊಡಲು ನಮಗೆ ಎಳ್ಳಷ್ಟೂ ಹಕ್ಕಿಲ್ಲ. ಯಾಕಂದರೆ ನಾವು ಈ ಹಣದಿಂದ ಅನೇಕ ಬಗೆಯಾಗಿ ಸತ್ಕಾರ್ಯಗಳನ್ನು ನೆರವೇರಿಸಬಹುದು. ಸಮಾಜದ ಯಾವನಾದರೊಬ್ಬ ವಿದ್ಯಾರ್ಥಿಯನ್ನು ವಿಲಾಯತಿಗೆ ಕಳಿಸಬಹುದು. ಇಲ್ಲವೆ ಇನ್ನೂ ಅನೇಕ ರೀತಿಯಿಂದ ಕೆಲಸ ಮಾಡಬಹುದು. ಅಂದಬಳಿಕ ಹೀಗೆ ಮಾಡದೆ ನಮ್ಮ ಸಮಾಜದವನೂ ಅಲ್ಲದ ಜಗದೀಶ ಬಾಬುವಿನ ಮಗನಿಗೇಕೆ ಅದನ್ನು ಬಿಟ್ಟುಗೊಡಬೇಕು? ನಿಮ್ಮ ಅಪ್ಪಣೆಯಾದೊಡನೆಯೇ ಎಲ್ಲವನ್ನೂ ವ್ಯವಸ್ಥಿತಗೊಳಿಸಿಯೇ ಬರಬೇಕೆಂದು ನಮ್ಮ ತಂದೆಯವರು ನನಗೆ ಆಜ್ಞಾಪಿಸಿದ್ದಾರೆ. "

ವಿಜಯೆಯು ಸ್ವರ್ಗಸ್ಥನಾದ ತಂದೆಯ ಕೊನೆಯ ಮಾತುಗಳನ್ನೆಲ್ಲ ಸ್ಮರಿಸಿ ಯೋಚನೆಗೊಳಗಾದಳು— ಒಮ್ಮೆಲೇ ಉತ್ತರ ಕೊಡಲಾಗಲಿಲ್ಲ. ಆಕೆಯ ಈ ಪರಿಯನ್ನು ಕಂಡು ವಿಲಾಸನು ಧೈರ್ಯ ಕೊಡುತ್ತ ನುಡಿದ: " ಇಲ್ಲ, ಇಲ್ಲ, ಚಾಂಚಲ್ಯ ತರವಲ್ಲ. ಮನದ ಹೊಯ್ದಾಟ, ದುರ್ಬಲತೆ ಇವೆಲ್ಲ ಪಾಪ. ಬರೇ ಪಾಪವಲ್ಲ, ಘೋರ ಪಾಪ. ಆತನ ಮನೆಯನ್ನು ನಿಮ್ಮ ವಶಪಡಿಸಿ ನಭೂತೋ ನಭವಿಷ್ಯತಿಯಾಗಿ ಮಾಡಿ ತೋರಿಸುವೆ. ಹಾಗೆ ನಾನು ಸಂಕಲ್ಪವನ್ನೇ ಮಾಡಿರುವೆ. ಬ್ರಾಹ್ಮ ಮಂದಿರದ ಪ್ರತಿಷ್ಠೆ,

ಮಾಡಿಸಿ ದೇಶದಲ್ಲಿಯ ನಿರ್ಗತಿಕ ಮೂರ್ಖ ಜನತೆಗೆ ಧರ್ಮದೀಕ್ಷೆಯನ್ನು ಕೊಡಿಸುವೆ. ನೀವೇ ಒಮ್ಮೆ ಯೋಚಿಸಿ ಈ ಮೂಢರ ಸಲುವಾಗಿಯೇ ನಿಮ್ಮ ತಂದೆಯವರು ಊರು ಬಿಡಬೇಕಾಗಿ ಬಂದಿತ್ತಲ್ಲವೇ ? ಅವರ ಮಗಳಾದ ನೀವು ಅಪಕಾರ ಮಾಡಿದ ಆ ಜನರಿಗೆ ಉಪಕಾರ ಮಾಡುವುದು ಯೋಗ್ಯವೇ ನೀವೇ ಯೋಚಿಸಿ ಇದರ ಉತ್ತರವನ್ನಷ್ಟು ಹೇಳಿ. "

ವಿಜಯೆಯ ಮನಸ್ಸು ಅಸ್ಥಿರವಾಯಿತು. ವಿಲಾಸನು ಅಧಿಕಾರ ವಾಣಿಯಿಂದ " ಊರಲ್ಲೆಲ್ಲ ನಿನ್ನ ಹೆಸರು ಯಾವ ರೀತಿ ಬೆಳಗೀತು ?— ಎಂತಹ ಯಶೋದುಂದುಭಿ ಮೊಳಗೀತು ?— ಒಮ್ಮೆಯಾದರೂ ಯೋಚಿಸಿರುವೆಯಾ ? ಬ್ರಾಹ್ಮ ಸಮಾಜದಲ್ಲಿ ಮನುಷ್ಯತ್ವವಿದೆ, ಹೃದಯವಿದೆ, ಸ್ವಾರ್ಥತ್ಯಾಗವಿದೆ, ಎಂಬುದನ್ನು ಹಿಂದುಗಳು ಒಪ್ಪಲೇ ಬೇಕಾದೀತು. ಹಾಗೆ ಮಾಡುವ ಭಾರವು ನಮ್ಮನ್ನೇ ಕೂಡಿದೆ. ಯಾವ ಜನರಿಂದ ಊರಿನಿಂದ ಹೊರಗೆ ಹಾಕಿಸಲ್ಪಟ್ಟನೋ ಅಂತಹನ ಸದ್ಗುಣಿ ಕನ್ಯೆ ಅದೇ ಜನತೆಯ ಕಲ್ಯಾಣಕ್ಕಾಗಿ ವಿಶೇಷ ಸ್ವಾರ್ಥತ್ಯಾಗ ಮಾಡಿದಳೆಂಬುದು ಇಡೀ ಭಾರತದಲ್ಲಿಯೇ ಎಂತಹ ನೈತಿಕ ಕ್ರಾಂತಿಯನ್ನುಂಟು ಮಾಡೀತು ? ನೀನೇ ಹೇಳು " ಎಂದು ವಿಲಾಸಬಿಹಾರಿಯು ಮುಂದಿದ್ದ ಮೇಜಿನ ಮೇಲೆ ಜೋರಿನಿಂದ ಗುದ್ದಿದ. ಇದನ್ನು ಕೇಳಕೇಳುತ್ತಲೇ ವಿಜಯೆಯು ಮುಗ್ಧಳಾದಳು. ಇಂತಹ ಗೌರವದ ಆಕಾಂಕ್ಷೆಯನ್ನು ಹತ್ತಿಕ್ಕುವುದು ಹದಿನೆಂಟು ವರ್ಷದ ಹುಡುಗಿಗೆ ನಿಜವಾಗಿಯೂ ಅಸಂಭವ. ಆಕೆ ಸಂಪೂರ್ಣವಾಗಿ ಅನುಮೋದಿಸಿದಳು. " ಆತನ ಮಗ ನರೇಂದ್ರನೆಂದು ಕೇಳಿರುವೆ. ಈಗ ಆತನೆಲ್ಲಿರುವ ? ಬಲ್ಲಿರಾ ? "

" ಬಲ್ಲೆ. ನಿರ್ಭಾಗ್ಯ ತಂದೆ ತೀರಿದ ಬಳಿಕ ಆತ ಮನೆಗೆ ಬಂದು ತಂದೆಯ ಶ್ರಾದ್ಧ ತೀರಿಸಿ ಅದೇ ಮನೆಯಲ್ಲಿದ್ದಾನೆ. "

" ತಮ್ಮೊಡನೆ ಬಹುಶಃ ಮಾತುಕತೆಯಾಗಿರಬಹುದಲ್ಲವೆ ? "

" ಮಾತುಕತೆ ? ಥೂ, ನಾನು ಯಾರೆಂಬದನ್ನು ಬಲ್ಲೆಯಾ ? " ಎಂದು ವಿಜಯೆಗೆ ಒಮ್ಮಿಂದೊಮ್ಮೆಗೇ ಅಪ್ರತಿಭಳಾಗುವಂತೆ ಮಾಡಿ ವಿಲಾಸ ಬಾಬುವು ತುಸು ನಗುತ್ತ ಹೇಳಿದ, " ಜಗದೀಶನ ಮಗನ ಹತ್ತರ ಮಾತಾಡಬೇಕೆಂದು ನಾನು ಕನಸಿನಲ್ಲಿ ಸಹ ಯೋಚಿಸಿದ್ದಿಲ್ಲ. ಆದರೂ ಆ ದಿನ

ದ್ದಳು. ಆದರೆ ಹೇಗೋ ಏನೋ ಆ ಮಾತುಗಳೆಲ್ಲ ಇಂದು ಆಕೆಯ ಕಣ್ಣಮುಂದೆ ಕಟ್ಟಿದಂತಾಯಿತು. ತನ್ನ ಹಳ್ಳಿಯಲ್ಲಿಯ ಮನೆ ಇಲ್ಲಿಯಂತೆ ವಿಶಾಲ ಹಾಗೂ ಸೊಬಗಿನದಾಗಿರದಿದ್ದರೂ ಅದು ತನ್ನ ಏಳು ತಲೆಗಳೆಯವರ ಆಸ್ತಿಯೆಂದು ಆಕೆಗೆ ಭಾಸವಾಯಿತು. ತಂದೆ-ತಾಯಿ ಅಜ್ಜ ಅಜ್ಜಿ, ಅವರ ಹೆತ್ತವರು ಹಿರಿಯರು ಈ ರೀತಿಯಾಗಿ ಅದೆಷ್ಟೋ ತಲೆಗಳೆಯವರ ಸುಖದುಃಖದ ದಿನಗಳು ಅಲ್ಲಿಯೇ ಕಳೆದಿರುವಾಗ ನನ್ನೊಬ್ಬಳ ದಿನವೇಕೆ ಕಳೆಯದು ? ಎಂದು ಯೋಚಿಸುವಳು.

ಸೂರ್ಯ ಮರೆಯಾದ. ಇದೇ ವಿಷಯವನ್ನು ಕುರಿತು ತಂದೆಯೊಡನೆ ಅದೆಷ್ಟೋ ಮಾತುಕತೆಯಾಗಿದ್ದಿತು. ತನ್ನ ತಂದೆ ಎಷ್ಟೋ ಸಾಯಂಕಾಲಗಳಲ್ಲಿ ಅದೇ ಆರಾಮು ಖುರ್ಚಿಯ ಮೇಲೆ ಒರಗಿ ನಿಟ್ಟುಸಿರಿಟ್ಟು "ವಿಜಯಾ, ನನ್ನ ಹಳ್ಳಿಯ ಮನೆಯಲ್ಲಿ ಈ ದುಃಖವನ್ನೆಂದೂ ಅನುಭವಿಸಿರಲಿಲ್ಲ. ಅಸ್ತಮಿಸುತ್ತಿರುವ ಸೂರ್ಯನ ಕೊನೆಯ ಕಿರಣಗಳನ್ನು ಈ ರೀತಿ ಅಡ್ಡಗಟ್ಟಿ ನನ್ನ ಊರಲ್ಲಿ ಯಾವ ಮನೆಯೂ ನಿಂತಿರಲಿಲ್ಲ. ಮಗೂ, ಅವನ್ನೆಲ್ಲ ನೀನು ಕಾಣಲಾರೆ. ಆದರೆ ನನ್ನ ಹೃದಯದ ಒಳಗಣ್ಣು ಚನ್ನಾಗಿ ಅವನ್ನೆಲ್ಲ ನೋಡುತ್ತಿದೆ. ಈಗ ನನ್ನ ಚಿಕ್ಕ ಹೂದೋಟದ ನೆರೆಯಲ್ಲಿ ಹರಿಯುವ ತೊರೆಯು ಸುವರ್ಣ ಜಲದಿಂದ ಚಕಚಕಿಸುತ್ತಿದೆ. ಅದರಾಚೆ ದಿಟ್ಟಿ ಹರಿಯುವತನಕ ಕಾಣುವ ಮೈದಾನುಗಳ ಅಂಚನ್ನು ಸೂರ್ಯಭಗವಾನನು ಮುಟ್ಟಿದರೂ, ಆ ಹಳ್ಳಿಯ ಮೋಹವನ್ನು ಆತ ತೊರೆಯಲಾರ. ಮಗೂ, ದಿನದ ಕೆಲಸಬೊಗಸೆಗಳನ್ನು ತೀರಿಸಿ ಮನೆಯೆಡೆಗೆ ಸಾಗುತ್ತಿರುವ ಮನುಷ್ಯರ ತಂಡವನ್ನು ನೀನು ಕಂಡಿರುವೆಯಷ್ಟೇ !"

ಹೀಗೆ ಹೇಳಿ ನಿಟ್ಟುಸಿರಿಟ್ಟು ಮೌನವಾಗಿಬಿಡುತ್ತಿದ್ದರು. ಯಾವುದೋ ಒಂದು ದಿನ ಮರೆತು ಬಂದ ಹಳ್ಳಿಗಾಗಿ ಇಲ್ಲಿಯ ಸುಖೈಶ್ವರ್ಯಗಳ ಮಧ್ಯದಲ್ಲಿಯೂ ತಂದೆಯ ಹೃದಯ ಕಳವಳಗೊಳ್ಳುತ್ತಿದ್ದುದನ್ನು ಆಕೆ ಅರಿತಿದ್ದಳು. ಆದರೆ ಅದರ ಕಾರಣವನ್ನು ಆಕೆ ಒಮ್ಮೆಯೂ ಯೋಚಿಸಿರಲಿಲ್ಲ. ಆದರೆ ವಿಲಾಸಬಾಬುವು ಹಳ್ಳಿಯತ್ತ ಆಕೆಯ ಲಕ್ಷ್ಯವನ್ನು ಸೆಳೆದು ಹೋದಂದಿನಿಂದೀಚೆಗೆ ಪರಲೋಕವಾಸಿ ತಂದೆಯ ಮಾತನ್ನೆಲ್ಲ ಮೆಲಕು ಹಾಕುತ್ತ ಹೋದಂತೆ ತನ್ನ ತಂದೆಯ ಅಂತರ್ಯದಲ್ಲಿ ಸುಪ್ತವಾದ ವೇದನೆಯ ಕಾರಣ

ಆಕೆಗೆ ಗೋಚರವಾಯಿತು. ಕಲಕತ್ತೆಯ ಈ ಜೀವನದಲ್ಲಿಯೂ ತಂದೆ ಕಳೆಯುತ್ತಿದ್ದ ಏಕಾಂತ ಜೀವನವನ್ನು ಕಣ್ಣಮುಂದೆ ಕಂಡು ಅಂಜಿದಳು. ಅಂತೆಯೇ ಜನ್ಮದಾರಭ್ಯ ಪರಿಚಯವಿಲ್ಲದ ಹಳ್ಳಿ ಅದಾವುದೋ ಪ್ರಬಲ ಶಕ್ತಿಯಿಂದ ತನ್ನೆಡೆಗೆ ಆಕೆಯನ್ನು ಎಳೆಯಹತ್ತಿತು.

೪

ಹಲವು ದಿನಗಳಿಂದ ಹಾಗೆಯೇ ಬಿದ್ದಿದ್ದ ಜಮೀನುದಾರನ ಮನೆ ವಿಲಾಸನ ಮೇಲ್ವಿಚಾರಣೆಯಲ್ಲಿ ಸುಧಾರಿಸಹತ್ತಿತು. ಜನ ಹಿಂದೆಂದೂ ಕಾಣದ ಚಿತ್ರ ವಿಚಿತ್ರ ಸಾಮಾನುಗಳು ಕಲಕತ್ತೆಯಿಂದ ಗಾಡಿಯಲ್ಲಿ ತುಂಬಿ ತುಂಬಿ ಬರುತ್ತಿದ್ದವು. ಜಮೀನುದಾರನ ಒಬ್ಬಳೇ ಒಬ್ಬಳಾದ ಮಗಳು ತನ್ನ ಹಳ್ಳಿಯಲ್ಲಿ ವಾಸಿಸಲು ಬರುವಳೆಂಬ ಸುದ್ದಿ ಬರೇ ಕೃಷ್ಣಪುರದಲ್ಲೊಂದೇ ಅಲ್ಲ; ರಾಧಾಪುರ, ವ್ರಜಪುರ ಮೊದಲಾದ ಸುತ್ತುಮುತ್ತಲಿನ ೫--೬ ಹಳ್ಳಿಗಳಲ್ಲಿ ಕೋಲಾಹಲವನ್ನೆಬ್ಬಿಸಿತು. ಮನೆಯ ಹತ್ತಿರವೇ ಜಮೀನುದಾರನಿರುವುದು ಜನಕ್ಕೆ ಸೇರುವುದಿಲ್ಲ. ಜಮೀನುದಾರನ ಊರಲ್ಲಿ ಪ್ರಜೆಗಳೂ ವಾಸಿಸುವುದಿಲ್ಲ. ಹೀಗಾಗಿ ಆಕೆ ಬರುವುದು ಒಂದು ಅನ್ಯಾಯ ಉತ್ಪಾತವೆಂದು ಅವರಿಗನಿಸಹತ್ತಿತು. ಮೆನೆಜರ ರಾಸಬಿಹಾರಿಯ ಕಲ್ಲೆದೆಯ ಆಡಳಿತೆಯ ಮೂಲಕವಾಗಿ ಈಗಾಗಲೇ ಅವರ ದುಃಖಕ್ಕೆ ಕೊರತೆ ಇರಲಿಲ್ಲ. ಇಂತಹ ಸಮಯದಲ್ಲಿ ಉರಿಯುವ ಬೆಂಕಿಗೆ ತುಪ್ಪವೆರಚಿದಂತೆ ಜಮೀನುದಾರನ ಮಗಳು ಬರುವ ಕಾಲದಲ್ಲಿ ಅದೆಷ್ಟೋ ತೊಂದರೆಗಳನ್ನು ಹೊಸದಾಗಿ ಸಹಿಸಬೇಕಾದೀತೆಂದು ಭಾವಿಸಿ ಜನ ಕೂಡಿದಲ್ಲೆಲ್ಲ ಇದನ್ನೇ ಚರ್ಚಿಸಹತ್ತಿದರು. ಸ್ವರ್ಗಸ್ಥನಾದ ವನವೀರ ಇರುವಲ್ಲಿಯತನಕ ಕಲಕತ್ತೆಗೆ ಹೋಗಿ ಆತನನ್ನು ಕಂಡುಬಂದರಾದರೂ ತಮಗಾದ ತೊಂದರೆಯ ನಿವಾರಣೆಯಾಗುವ ಆಸೆ ಪ್ರಜೆಗಳಿಗಿದ್ದುದರಿಂದ ದುಃಖದಲ್ಲಿಯಾದರೂ ಒಂದು ಸುಖದ ಹಂಬಲವಿತ್ತು. ಆದರೆ ಹುಡುಗಿ ಚಿಕ್ಕವಳಾದುದರಿಂದ ಬಿಸಿ ರಕ್ತದವಳಿರಬಹುದಾದ್ದರಿಂದಲೂ ರಾಸಬಿಹಾರಿಯ ಮಗನ ಜೊತೆಗೆ ಆಕೆಯ ಲಗ್ನವಾಗುವುದಿದೆಯೆಂಬ ಸುದ್ದಿ ಹಬ್ಬಿರುವುದರಿಂದಲೂ ಆಕೆಯೆಷ್ಟಾದರೂ ಮ್ಲೇಂಚ್ಛಳು, ಆದುದರಿಂದ ನಿಕಟ ಭವಿಷ್ಯದಲ್ಲಿಯೇ ರಾಸಬಿಹಾರಿಯಿಂದಾಗಬಹುದಾದ ಅತ್ಯಾಚಾರಗಳ ಕಲ್ಪನೆ ಬಂದು ಅವರ ಸುಖವೆಲ್ಲ ಮಣ್ಣುಗೂಡಿ

ದ್ದಳು. ಆದರೆ ಹೇಗೋ ಏನೋ ಆ ಮಾತುಗಳೆಲ್ಲ ಇಂದು ಆಕೆಯ ಕಣ್ಣಮುಂದೆ ಕಟ್ಟಿದಂತಾಯಿತು. ತನ್ನ ಹಳ್ಳಿಯಲ್ಲಿಯ ಮನೆ ಇಲ್ಲಿಯಂತೆ ವಿಶಾಲ ಹಾಗೂ ಸೊಬಗಿನದಾಗಿರದಿದ್ದರೂ ಅದು ತನ್ನ ಏಳು ತಲೆಗಳೆಯವರ ಆಸ್ತಿಯೆಂದು ಆಕೆಗೆ ಭಾಸವಾಯಿತು. ತಂದೆ-ತಾಯಿ ಅಜ್ಜ ಅಜ್ಜಿ, ಅವರ ಹೆತ್ತವರು ಹಿರಿಯರು ಈ ರೀತಿಯಾಗಿ ಅದೆಷ್ಟೋ ತಲೆಗಳೆಯವರ ಸುಖದುಃಖದ ದಿನಗಳು ಅಲ್ಲಿಯೇ ಕಳೆದಿರುವಾಗ ನನ್ನೊಬ್ಬಳ ದಿನವೇಕೆ ಕಳೆಯದು ? ಎಂದು ಯೋಚಿಸುವಳು.

ಸೂರ್ಯ ಮರೆಯಾದ. ಇದೇ ವಿಷಯವನ್ನು ಕುರಿತು ತಂದೆಯೊಡನೆ ಅದೆಷ್ಟೋ ಮಾತುಕತೆಯಾಗಿದ್ದಿತು. ತನ್ನ ತಂದೆ ಎಷ್ಟೋ ಸಾಯಂಕಾಲಗಳಲ್ಲಿ ಅದೇ ಆರಾಮ ಖುರ್ಚಿಯ ಮೇಲೆ ಒರಗಿ ನಿಟ್ಟುಸಿರಿಟ್ಟು “ ವಿಜಯಾ, ನನ್ನ ಹಳ್ಳಿಯ ಮನೆಯಲ್ಲಿ ಈ ದುಃಖವನ್ನೆಂದೂ ಅನುಭವಿಸಿರಲಿಲ್ಲ. ಅಸ್ತಮಿಸುತ್ತಿರುವ ಸೂರ್ಯನ ಕೊನೆಯ ಕಿರಣಗಳನ್ನು ಈ ರೀತಿ ಅಡ್ಡಗಟ್ಟಿ ನನ್ನ ಊರಲ್ಲಿ ಯಾವ ಮನೆಯೂ ನಿಂತಿರಲಿಲ್ಲ. ಮಗೂ, ಅವನ್ನೆಲ್ಲ ನೀನು ಕಾಣಲಾರೆ. ಆದರೆ ನನ್ನ ಹೃದಯದ ಒಳಗಣ್ಣು ಚನ್ನಾಗಿ ಅವನ್ನೆಲ್ಲ ನೋಡುತ್ತಿದೆ. ಈಗ ನನ್ನ ಚಿಕ್ಕ ಹೂದೋಟದ ನೆರೆಯಲ್ಲಿ ಹರಿಯುವ ತೊರೆಯು ಸುವರ್ಣ ಜಲದಿಂದ ಚಕಚಕಿಸುತ್ತಿದೆ. ಅದರಾಚೆ ದಿಟ್ಟಿ ಹರಿಯುವತನಕ ಕಾಣುವ ಮೈದಾನುಗಳ ಅಂಚನ್ನು ಸೂರ್ಯಭಗವಾನನು ಮುಟ್ಟಿದರೂ, ಆ ಹಳ್ಳಿಯ ಮೋಹವನ್ನು ಆತ ತೊರೆಯಲಾರ. ಮಗೂ, ದಿನದ ಕೆಲಸಬೊಗಸೆಗಳನ್ನು ತೀರಿಸಿ ಮನೆಯೆಡೆಗೆ ಸಾಗುತ್ತಿರುವ ಮನುಷ್ಯರ ತಂಡವನ್ನು ನೀನು ಕಂಡಿರುವೆಯಷ್ಟೇ ! ”

ಹೀಗೆ ಹೇಳಿ ನಿಟ್ಟುಸಿರಿಟ್ಟು ಮೌನವಾಗಿಬಿಡುತ್ತಿದ್ದರು. ಯಾವುದೋ ಒಂದು ದಿನ ಮರೆತು ಬಂದ ಹಳ್ಳಿಗಾಗಿ ಇಲ್ಲಿಯ ಸುಖೈಶ್ವರ್ಯಗಳ ಮಧ್ಯದಲ್ಲಿಯೂ ತಂದೆಯ ಹೃದಯ ಕಳವಳಗೊಳ್ಳುತ್ತಿದ್ದುದನ್ನು ಆಕೆ ಅರಿತಿದ್ದಳು. ಆದರೆ ಅದರ ಕಾರಣವನ್ನು ಆಕೆ ಒಮ್ಮೆಯೂ ಯೋಚಿಸಿರಲಿಲ್ಲ. ಆದರೆ ವಿಲಾಸಬಾಬುವು ಹಳ್ಳಿಯತ್ತ ಆಕೆಯ ಲಕ್ಷ್ಯವನ್ನು ಸೆಳೆದು ಹೋದಂದಿನಿಂದೀಚೆಗೆ ಪರಲೋಕವಾಸಿ ತಂದೆಯ ಮಾತನ್ನೆಲ್ಲ ಮೆಲುಕು ಹಾಕುತ್ತ ಹೋದಂತೆ ತನ್ನ ತಂದೆಯ ಅಂತರ್ಯದಲ್ಲಿ ಸುಪ್ತವಾದ ವೇದನೆಯ ಕಾರಣ

ಆಕೆಗೆ ಗೋಚರವಾಯಿತು. ಕಲಕತ್ತೆಯ ಈ ಜೀವನದಲ್ಲಿಯೂ ತಂದೆ ಕಳೆಯುತ್ತಿದ್ದ ಏಕಾಂತ ಜೀವನವನ್ನು ಕಣ್ಣಮುಂದೆ ಕಂಡು ಅಂಜಿದಳು. ಅಂತೆಯೇ ಜನ್ಮದಾರಭ್ಯ ಪರಿಚಯವಿಲ್ಲದ ಹಳ್ಳಿ ಅದಾವುದೋ ಪ್ರಬಲ ಶಕ್ತಿಯಿಂದ ತನ್ನೆಡೆಗೆ ಆಕೆಯನ್ನು ಎಳೆಯಹತ್ತಿತು.

೪

ಹಲವು ದಿನಗಳಿಂದ ಹಾಗೆಯೇ ಬಿದ್ದಿದ್ದ ಜಮೀನುದಾರನ ಮನೆ ವಿಲಾಸನ ಮೇಲ್ವಿಚಾರಣೆಯಲ್ಲಿ ಸುಧಾರಿಸಹತ್ತಿತು. ಜನ ಹಿಂದೆಂದೂ ಕಾಣದ ಚಿತ್ರ ವಿಚಿತ್ರ ಸಾಮಾನುಗಳು ಕಲಕತ್ತೆಯಿಂದ ಗಾಡಿಯಲ್ಲಿ ತುಂಬಿ ತುಂಬಿ ಬರುತ್ತಿದ್ದಿತು. ಜಮೀನುದಾರನ ಒಬ್ಬಳೇ ಒಬ್ಬಳಾದ ಮಗಳು ತನ್ನ ಹಳ್ಳಿಯಲ್ಲಿ ವಾಸಿಸಲು ಬರುವಳೆಂಬ ಸುದ್ದಿ ಬರೀ ಕೃಷ್ಣಪುರದಲ್ಲೊಂದೇ ಅಲ್ಲ; ರಾಧಾಪುರ, ವ್ರಜಪುರ ಮೊದಲಾದ ಸುತ್ತುಮುತ್ತಲಿನ ೫--೬ ಹಳ್ಳಿಗಳಲ್ಲಿ ಕೋಲಾಹಲವನ್ನೆಬ್ಬಿಸಿತು. ಮನೆಯ ಹತ್ತಿರವೇ ಜಮೀನುದಾರನಿರುವುದು ಜನಕ್ಕೆ ಸೇರುವುದಿಲ್ಲ. ಜಮೀನುದಾರನ ಊರಲ್ಲಿ ಪ್ರಜೆಗಳೂ ವಾಸಿಸುವುದಿಲ್ಲ. ಹೀಗಾಗಿ ಆಕೆ ಬರುವುದು ಒಂದು ಅನ್ಯಾಯ ಉತ್ಪಾತವೆಂದು ಅವರಿಗನಿಸಹತ್ತಿತು. ಮೆನೆಜರ ರಾಸಬಿಹಾರಿಯ ಕಲ್ಲೆದೆಯ ಆಡಳಿತೆಯ ಮೂಲಕವಾಗಿ ಈಗಾಗಲೇ ಅವರ ದುಃಖಕ್ಕೆ ಕೊರತೆ ಇರಲಿಲ್ಲ. ಇಂತಹ ಸಮಯದಲ್ಲಿ ಉರಿಯುವ ಬೆಂಕಿಗೆ ತುಪ್ಪವೆರಚಿದಂತೆ ಜಮೀನುದಾರನ ಮಗಳು ಬರುವ ಕಾಲದಲ್ಲಿ ಅದೆಷ್ಟೋ ತೊಂದರೆಗಳನ್ನು ಹೊಸದಾಗಿ ಸಹಿಸಬೇಕಾದೀತೆಂದು ಭಾವಿಸಿ ಜನ ಕೂಡಿದಲ್ಲೆಲ್ಲ ಇದನ್ನೇ ಚರ್ಚಿಸಹತ್ತಿದರು. ಸ್ವರ್ಗಸ್ಥನಾದ ವನವೀರ ಇರುವಲ್ಲಿಯತನಕ ಕಲಕತ್ತೆಗೆ ಹೋಗಿ ಆತನನ್ನು ಕಂಡುಬಂದರಾದರೂ ತಮಗಾದ ತೊಂದರೆಯ ನಿವಾರಣೆಯಾಗುವ ಆಸೆ ಪ್ರಜೆಗಳಿಗಿದ್ದುದರಿಂದ ದುಃಖದಲ್ಲಿಯಾದರೂ ಒಂದು ಸುಖದ ಹಂಬಲವಿತ್ತು. ಆದರೆ ಹುಡುಗಿ ಚಿಕ್ಕವಳಾದುದರಿಂದ ಬಿಸಿ ರಕ್ತದವಳಿರಬಹುದಾದ್ದರಿಂದಲೂ ರಾಸಬಿಹಾರಿಯ ಮಗನ ಜೊತೆಗೆ ಆಕೆಯ ಲಗ್ನವಾಗುವುದಿದೆಯೆಂಬ ಸುದ್ದಿ ಹಬ್ಬಿರುವುದರಿಂದಲೂ ಆಕೆಯೆಷ್ಟಾದರೂ ಮ್ಲೇಂಚ್ಛಳು, ಆದುದರಿಂದ ನಿಕಟ ಭವಿಷ್ಯದಲ್ಲಿಯೇ ರಾಸಬಿಹಾರಿಯಿಂದಾಗ ಬಹುದಾದ ಅತ್ಯಾಚಾರಗಳ ಕಲ್ಪನೆ ಬಂದು ಅವರ ಸುಖವೆಲ್ಲ ಮಣ್ಣುಗೂಡಿ

ದಂತಾಯಿತು. ಜನಿವಾರದವರೂ, ಜನಿವಾರವಿಲ್ಲದವರೂ ಒಂದೇ ಅಭಿಪ್ರಾಯ ಪಟ್ಟರು. ಚಳಿಗಾಲದ ಮೊದಲಲ್ಲಿ ಒಂದು ಸುಂದರ ಪ್ರಭಾತದಲ್ಲಿ ನೂರಾರು ನರನಾರಿಯರ ಭಯ ಕುತೂಹಲ ಬೆರೆತ ದೃಷ್ಟಿ ಆಕೆಯನ್ನೇ ನೋಡುತ್ತಿರಲು ಹುಗಳಿ ಸ್ಟೇಶನ್ನಿನಿಂದ ಎರಡು ಕುದುರೆಗಳ ಗಾಡಿಯಲ್ಲಿ ಜಮೀನುದಾರನ ಮಗಳು ಕುಳಿತು ತನ್ನ ಹೆತ್ತವರು ಹಾಗೂ ಹಿರಿಯರು ಕಾಲಕಳೆದ ಹಳೆಯ ಮನೆಗೆ ಬಂದು ಮುಟ್ಟಿದಳು.

ಬಂಗಾಲೀ ಹುಡಿಗಿ ಹದಿನೆಂಟು ವರ್ಷ ಆಗಿದೆಯಾದರೂ ಮದುವೆ ಯಾಗಿಲ್ಲ, ಮೊಚ್ಚೆ ಹಾಕಿ ತಿರುಗುತ್ತಿದ್ದಾಳೆ, ತಿನ್ನುಣ್ಣುವುದರಲ್ಲಿ ಜಾತಿ ಭೇದವಿಲ್ಲ ಇತ್ಯಾದಿಯಾಗಿ ಜನರು ಹಿಂದೆ ಗೊಣಗುಟ್ಟಿದರೂ ದಿನಾಲು ಒಬ್ಬಿಬ್ಬರು ಬಂದು ನಜರಾಣಿ - ಕಾಣಿಕೆಯನ್ನರ್ಪಿಸಿ ತಮಗಾದ ಸಂತೋಷ ವನ್ನು ಸೂಚಿಸಿ ಹೋಗುತ್ತಿದ್ದರು. ಹೀಗೆ ಐದಾರು ದಿನ ಗತಿಸಿತು. ಒಂದು ಬೆಳಿಗ್ಗೆ ಚಹಾಪಾನ ಮುಗಿಸಿ ಕೆಳಗಿನ ದಿವಾಣಖಾನೆಯಲ್ಲಿ ಕುಳಿತು ವಿಲಾಸ ಬಾಬುವಿನ ಜೊತೆಗೆ ಆಸ್ತಿಪಾಸ್ತಿಯ ವಿಷಯವಾಗಿ ಮಾತುಕತೆ ನಡೆಸಿರು ವಾಗ ಸಜ್ಜನರೊಬ್ಬರು ತಮ್ಮನ್ನು ಕಾಣಲು ಬಂದಿದ್ದಾರೆಂದು ನೌಕರನು ತಿಳಿಸಿದನು.

“ ಇಲ್ಲಿಯೇ ಕರೆದುಕೊಂಡು ಬಾ ” ಎಂದು ವಿಜಯೆ ಆಜ್ಞಾಪಿಸಿ ದಳು. ಕೆಲ ದಿನಗಳಿಂದೀಚೆ ಪ್ರಜೆಗಳೆಲ್ಲ ಕಾಣಿಕೆ ತಂದು ಕಾಣಲು ಬರು ತ್ತಿದ್ದುದರಿಂದ ಆಕೆ ಹೊಸದಾಗಿ ಬರುವವನ ಬಗ್ಗೆ ವಿಶೇಷವಾಗಿ ಯೋಚಿ ಸಿರಲಿಲ್ಲ. ಆದರೆ ಕ್ಷಣಹೊತ್ತಿನ ನಂತರ ಆ ಸಜ್ಜನನು ನೌಕರನ ಹಿಂದಿಂದೇ ಕೋಣೆಯಲ್ಲಿ ಕಾಲಿಟ್ಟ. ಆತನನ್ನು ಕಂಡೊಡನೆಯೇ ಆಕೆ ವಿಸ್ಮಿತಳಾದಳು. ಆತನ ವಯಸ್ಸು ಅಜಮಾಸು ೨೪-೨೫ ಇರಬಹುದು. ಆತ ಉದ್ದ ಪ್ರಕೃತಿಯ ಮನುಷ್ಯ. ಅದಕ್ಕೆ ತಕ್ಕಂತೆ ಹೃಷ್ಟ ಪುಷ್ಟನಿರದೆ ತೆಳ್ಳಗಾಗಿದ್ದ. ಅಚ್ಚ ಬಿಳಿಯ ಬಣ್ಣ. ಮೊಗಮೀಸೆ ಒಡೆದಿತ್ತು. ಮೈಮೇಲೆ ಅಂಗಿ ಇರದೆ ಹೊದೆದುಕೊಂಡ ಶಾಲಿನ ಮಧ್ಯದಿಂದ ಕಾಣುತ್ತಿದ್ದ ಬಿಳೇ ಜನಿವಾರ ಆತನಿಗೆ ಚೆನ್ನಾಗಿ ಶೋಭಿಸುತ್ತಿದ್ದಿತು. ಆತ ಸಾದಾ ನಮಸ್ಕರಿಸಿ ಅಲ್ಲಿಂದ ಖುರ್ಚಿಯೊಂದನ್ನೆಳೆದು ಕುಳಿತುಕೊಂಡ. ಮೊದಲು ಭೆಟ್ಟಿಗೆ ಬಂದವರೆಲ್ಲ ಕಾಣಿಕೆ ಕೊಡುವುದಕ್ಕಾಗಿ ಮಾತ್ರ ಬಂದಿದ್ದರು. ಆದರೆ ಈತನ ಆಚರಣೆ

ಯಲ್ಲಿ ಸಂಕೋಚದ ಹೆಸರಿದ್ದಿಲ್ಲ. ಈತನ ಬರುವಿಕೆಯಿಂದ ವಿಜಯೆಗಿಷ್ಟೇ ಅಲ್ಲ; ವಿಲಾಸನಿಗೂ ಸಾಕಷ್ಟು ಆಶ್ಚರ್ಯವಾಯಿತು. ಆತ ಬೇರೆ ಹಳ್ಳಿಯಲ್ಲಿ ವಾಸಿಸುತ್ತಿದ್ದನಾದರೂ ಇತ್ತಕಡೆಯ ಎಲ್ಲ ಜನರ ಪರಿಚಯ ಆತನಿಗಿತ್ತು. ಆಗಂತುಕನೇ ಮೊದಲು ಮಾತಿಗಿಟ್ಟ. ಆತನೆಂದ "ನನ್ನ ಮಾವ ಪೂರ್ಣ ಗಾಂಗುಲಿ ಮಹಾಶಯನು ತಮ್ಮ ನೆರೆಯವ. ಅದೇ ಅವನ ಮನೆ. ಅವನ ಹಿರಿಯರಿಂದ ನಡೆದು ಬಂದ ದುರ್ಗಾ ಪೂಜೆಯನ್ನು ತಾವು ಈ ಸಲ ನಡೆಯಗೊಡುವದಿಲ್ಲವೆಂದು ಕೇಳಿ ನನಗೆ ಅತೀವ ಆಶ್ಚರ್ಯವಾಗಿದೆ. ಇದರ ಉದ್ದೇಶವೇನು?" ಎಂದು ಕೇಳಿ ವಿಜಯೆಯೆಡೆಗೆ ನೋಡಿದ.

ಪ್ರಶ್ನೆ ಹಾಗೂ ಆತ ಕೇಳಿದ ರೀತಿಯಿಂದ ವಿಜಯೆ ಚಕಿತಳಾದಳು. ಮನದಲ್ಲಿಯೇ ಬೇಸರಪಟ್ಟದ್ದೂ ನಿಜ. ಆದರೂ ಪ್ರಶ್ನೆಗೆ ಉತ್ತರ ವನ್ನೀಯಲಿಲ್ಲ.

ವಿಲಾಸನೇ ರುಕ್ಷ ಸ್ವರದಿಂದ ಉತ್ತರವಿತ್ತ. "ಇದಕ್ಕಾಗಿಯೇ ಮಾವನ ವತಿಯಿಂದ ತಾವು ಜಗಳ ಹೂಡಲು ಬಂದಿರುವಿರಾ? ಆದರೆ ಯಾರೊಡನೆ ಮಾತನಾಡುತ್ತಿದ್ದೀರೆಂದು ಯೋಚಿಸಿ ಮಾತನಾಡಿ."

ಆಗಂತುಕನು ನಕ್ಕು ತುಸು ನಾಲಗೆ ಕಚ್ಚಿದ. "ಅದನ್ನೇನೂ ಮರೆತಿಲ್ಲ ನಾನು. ಅಲ್ಲದೆ ಜಗಳವಾಡಲಿಕ್ಕೂ ಬರಲಿಲ್ಲ. ನನಗೆ ವಿಶ್ವಾಸವಾಗದ್ದರಿಂದ ಕೇಳಿ ತಿಳಿದುಕೊಂಡು ಹೋಗಲು ಬಂದಿರುವೆ."

ವಿಲಾಸನು ವ್ಯಂಗವಾಗಿ ನುಡಿದ "ಏಕೆ? ವಿಶ್ವಾಸವಾಗಲಿಲ್ಲ?"

"ಹೇಗಾದೀತು? ನೀವೇ ಹೇಳಿ ನೋಡುವಾ. ವಿನಾಕಾರಣವಾಗಿ ನೆರೆಯವರ ಧರ್ಮ ವಿಶ್ವಾಸವನ್ನು ಯಾರು ತಾನೇ ಮುರಿದಾರು? ಇಂತಹ ಮಾತಿನಲ್ಲಿ ವಿಶ್ವಾಸ ಪಡದಿರುವುದೇ ಸ್ವಾಭಾವಿಕವಲ್ಲವೇ?"

ಧರ್ಮ ಮತ ಇವುಗಳ ಹೆಸರಿನಿಂದ ತಿಕ್ಕಾಟ ನಡೆಸುವದು ಬಾಲ್ಯ ದಿಂದಲೂ ವಿಲಾಸನಿಗೆ ಮೆಚ್ಚು. ಆತ ಉತ್ಸಾಹಿತನಾಗಿ ಉಪಹಾಸದಿಂದ "ತಮಗೆ ನಿರರ್ಥಕವೆನಿಸಿದರೆ ಉಳಿದವರಿಗೂ ಹಾಗೆಯೇ ಅನಿಸಬೇಕೆಂಬು ದಕ್ಕಾಗಲೀ, ನೀವು ಧರ್ಮವೆಂದು ತಿಳಿಯುವದನ್ನೇ ಇತರರೆಲ್ಲ ಕಣ್ಣುಮುಚ್ಚಿ ನಂಬಬೇಕೆಂಬುವದಕ್ಕಾಗಲೀ, ಯಾವ ಕಾರಣವೂ ಇರಲಾರದಷ್ಟೇ ಮೂರ್ತಿ ಪೂಜೆ ನಮ್ಮ ಧರ್ಮವಲ್ಲ. ಆದ್ದರಿಂದ ಅದನ್ನು ಬಂದು ಮಾಡುವುದು ಅನ್ಯಾಯವೆಂದು ನಮಗನಿಸುವದಿಲ್ಲ" ಎಂದ.

ಆಗಂತುಕ ವಿಸ್ಮಿತನಾದ. ಆತ ವಿಜಯೆಗೆ ಕೇಳಿದ "ನೀವು ಇದನ್ನೇ ಅನುಮೋದಿಸುವಿರಾ"

ಬೇರೆ ಉತ್ತರ ನನ್ನಿಂದ ಸಿಗಬಹುದೆಂದು ಆಶಿಸಿದ್ದೀರಾ?

"ಹೌದು. ಇವರು ಹೊರಗಿನವರಾದುದರಿಂದ ನಿಮ್ಮ ವಿಷಯದಲ್ಲಿ ಅನಭಿಜ್ಞರಿರಬಹುದು." ವಿಲಾಸ ಅಭಿಮಾನದಿಂದ ನುಡಿದ.

ಆಗಂತುಕನು ತುಸು ತಡೆದು ವಿಜಯೆಯೆಡೆಗೇ ದಿಟ್ಟಿಸಿ "ಪರದೇಶದವನಲ್ಲವಿದ್ದರೂ ನಾನು ಈ ಊರಿನವನಲ್ಲವೆಂಬುದು ನಿಜ. ಆದರೂ ತಮ್ಮಿಂದ ಈ ಮಾತು ಬಂದೀತೆಂದು ಕಲ್ಪಿಸಿರಲಿಲ್ಲ. ಮೂರ್ತಿಪೂಜೆಯ ಬಗ್ಗೆ ನೀವು ಒಪ್ಪದಿದ್ದರೂ ಸಾಕಾರ-ನಿರಾಕಾರ ಉಪಾಸನೆಯ ತರ್ಕಕ್ಕೆ ನಾನು ಬಂದಿಲ್ಲ. ನೀವು ಬ್ರಹ್ಮ ಸಮಾಜದವರೆಂದು ನಾನು ಬಲ್ಲೆ. ಆದರೆ ಇದೇನು ಹಾಗಲ್ಲ. ಊರಲ್ಲಿ ಇದೊಂದೇ ಪೂಜೆ. ಜನವೆಲ್ಲ ಉತ್ಸುಕತೆಯಿಂದ ಈ ಮೂರು ದಿನವನ್ನೇ ಎದುರು ನೋಡುತ್ತಿರುತ್ತಾರೆ. ಈ ಊರು ನಿಮ್ಮದು. ಪ್ರಜೆಗಳೆಲ್ಲ ನಿಮ್ಮ ಹೆಣ್ಣು-ಗಂಡು ಮಕ್ಕಳು. ನೀವು ಬಂದುದರಿಂದ ತಮ್ಮ ಆನಂದ ಸಾಗರಕ್ಕೆ ಚಂದ್ರೋದಯವಾದೀತೆಂದು ಜನತೆಯೆಲ್ಲ ಭಾವಿಸಿದೆ. ಆದರೆ ಅವರ ಆನಂದವನ್ನು ಹೆಚ್ಚಿಸದೆ, ದುಃಖಿತರಾದ ಪ್ರಜೆಗಳ ದುಃಖವನ್ನು ಇನ್ನಷ್ಟು ಹೆಚ್ಚಿಸುವಿರೆಂಬುದನ್ನು ನಾನು ಹೇಗೆ ನಂಬಲಿ, ನಂಬಿಕೆಯೇ ಆಗಲೊಲ್ಲದು" ಎಂದನು.

ವಿಜಯೆ ಒಮ್ಮೆಲೇ ಉತ್ತರ ಕೊಡಲಾರದಾದಳು. ದುಃಖಿತ ಪ್ರಜೆಗಳ ಹೆಸರನ್ನು ಕೇಳಿದೊಡನೆಯೇ ಆಕೆಯ ಹೃದಯ ಕಳವಳಗೊಂಡಿತು. ಕೆಲಹೊತ್ತು ಯಾರೂ ಮಾತಾಡಲು ಸಮರ್ಥರಾಗಲಿಲ್ಲ. ಆದರೆ ವಿಲಾಸನು ಮಾತ್ರ ವಿಜಯೆಯ ನಿಶ್ಶಬ್ದ ಸ್ನೇಹಾರ್ದ್ರ ಮುಖವನ್ನು ಕಂಡು ಮನದಲ್ಲಿಯೇ ಸಂತಾಪ ಹಾಗೂ ಉದ್ವಿಗ್ನನಾಗಿ ತಿರಸ್ಕಾರದಿಂದ ನುಡಿದ. "ನಿಮ್ಮ ನಾಲಗೆ ಉದ್ದವಾಯಿತು. ನಿಮ್ಮೊಡನೆ ಸಾಕಾರ-ನಿರಾಕಾರದ ಬಗ್ಗೆ ತರ್ಕ ವಿತರ್ಕ ಮಾಡುವಷ್ಟು ಸಮಯವೂ ನನ್ನಲ್ಲಿಲ್ಲ. ಅದು ಹಾಳಾಗಲಿ! ನಿನ್ನ ಮಾವ ಒಂದೇಕೆ ಇಪ್ಪತ್ತು ಮೂರ್ತಿ ಹುಗಿದುಕೊಂಡು ಮನೆಯಲ್ಲಿ ಕೂತು ಪೂಜೆ ಮಾಡಲೊಲ್ಲನೇಕೆ? ಅದಕ್ಕೆ ನನ್ನದಾವ ಅಡ್ಡಿಯೂ ಇಲ್ಲ. ಆದರೆ ದಿನಾಲು ಹಗಲಿರುಳೆನ್ನದೆ ಡೋಲು ಮೃದಂಗ ಬಾರಿಸಿ ಈಕೆಗೆ ನಿದ್ದೆಗೊಡದೆ

ಎಲ್ಲಿ ಅಸ್ವಸ್ಥಳನ್ನಾಗಿ ಮಾಡಿಬಿಡುವಿರೋ ಎಂದು ಅಡ್ಡಿಮಾಡಿದ್ದೆ.

ಆಗಂತುಕನು ತುಸು ನಕ್ಕು “ ಹಗಲಿರುಳೇನೂ ಬಾರಿಸುವದಿಲ್ಲ. ಆದರೆ ಎಲ್ಲ ಉತ್ಸವಗಳಲ್ಲಿ ತುಸುವಾದರೂ ಗದ್ದಲ-ಗೊಂದಲವಾಗಿಯೇ ತೀರುತ್ತಿದೆ,” ಎಂದು ಹೇಳಿ ವಿಜಯೆಯನ್ನೇ ಲಕ್ಷಿಸಿ “ ಅಂತಹ ಗದ್ದಲ ವಾದರೆ ತಾವೇನು ಮಾಡುವಿರಿ? ಆ ಮಹಾತಾಯಿಯ ಜಾತಿಯವರಾದುದ ರಿಂದ ಆಕೆಯ ಆನಂದದ ಗದ್ದಲವನ್ನು ತಾವಲ್ಲದೆ ಇನ್ನಾರು ಸಹಿಸುವರು ?” ಎಂದು ಕೇಳಿದನು.

ವಿಜಯೆ ಮೊದಲಿನಂತೆ ಸುಮ್ಮನೆ ಕುಳಿತಿದ್ದಳು. ವಿಲಾಸ ವ್ಯಂಗವಾಗಿ ಒಣನಗೆ ನಕ್ಕು ನುಡಿದ “ ನೀವು ನಿಮ್ಮ ಕೆಲಸ ಸಾಧಿಸಲು ತಾಯಿ ಮಕ್ಕಳ ಉಪಮೆ ಇತ್ತಿರಿ. ಅದರಲ್ಲೇನು ತೊಂದರೆ ಇಲ್ಲ. ಬಿಡಿ. ಆದರೆ ನೀವು ಒಂದು ವೇಳೆ ಮುಸಲ್ಮಾನರಾಗಿ ಮಾವನ ಕಿವಿಯ ಹತ್ತರ ಮೊಹರಮ್ಮ ಸುರು ಮಾಡಿದ್ದರೆ ಆತನೆಂದಾದರೂ ಸಹಿಸುತ್ತಿದ್ದನೆ? ಏನೇ ಇರಲಿ. ವಾದ ವಿವಾದ ಮಾಡಲು ನಮ್ಮ ಹತ್ತರ ವೇಳೆಯಿಲ್ಲ. ತಂದೆಯ ಅಪ್ಪಣೆಯಂ ತೆಯೇ ಎಲ್ಲವೂ ನೆರವೇರುವದು. ಗಂಟೆ ಜಾಂಗಟೆಗಳ ಗದ್ದಲದಲ್ಲಿ ಆಕೆಯ ಕಿವಿ ಕಿವುಡಾಗಿಸಲು ನಾನವರನ್ನು ಕಲಕತ್ತೆಯಿಂದ ಕರತಂದಿಲ್ಲ. ತಿಳಿಯಿತೇ?”

ಆತನ ಕ್ಷುದ್ರವ್ಯಂಗದ ಮಾತ್ರೆ ಮಿತಿಮೀರಿದುದರಿಂದ ಆಗಂತುಕನ ನೋಟ ಪ್ರಖರವಾಯಿತು. ವಿಲಾಸನ ಮುಖದೆಡೆಗೆ ಕಣ್ಣೆತ್ತಿ “ ನಿಮ್ಮ ತಂದೆ ಯಾರು? ಪೂಜೆ ಬಂದು ಮಾಡಿಸಲು ಆತನಿಗೇನು ಹಕ್ಕು? ಎಂಬುದನ್ನು ನಾನರಿಯೆ. ಆದರೆ ಮೊಹರಮ್ಮದ ಅದ್ಭುತ ಉಪಮೆಯನ್ನು ಕೊಟ್ಟಿರಲ್ಲ; ಇದು ಒಂದು ವೇಳೆ ಹಿಂದುಗಳ ಹಬ್ಬವಾಗದೆ ಮುಸಲ್ಮಾನರ ಮೊಹರಮ್ಮ ಆಗಿದ್ದರೆ ಅದನ್ನು ತಡೆಯುವ ಸಾಹಸವಾದರೂ ನಿಮಗಾಗುತ್ತಿತ್ತೆ? ಈ ನಿಮ್ಮ ಅತ್ಯಾಚಾರ ಕೇವಲ ಸರಳ ಸ್ವಭಾವದ ಸ್ವಜಾತಿಯವರಲ್ಲೇ ಅಲ್ಲದೆ ಇನ್ನಾರಲ್ಲಿ ನಡೆದೀತು ?” ಎಂದು ಕೇಳಿದನು.

ವಿಲಾಸ ಆಟ್ಟನೆ ಎದ್ದ. ಕಣ್ಣು ಕೆಂಪುಮಾಡಿ ಭಯಾನಕ ದನಿಯಿಂದ ಗರ್ಜಿಸಿದ. “ ತಂದೆಯ ವಿಷಯವಾಗಿ ತುಸು ನಾಲಗೆ ಬಿಗಿಹಿಡಿದು ಮಾತ ನಾಡಿರಿ. ಇಲ್ಲವಾದರೆ ಅವರಾರು? ಅವರ ಅಧಿಕಾರವೇನು ಎಂಬುದನ್ನು ಇನ್ನೊಂದು ರೀತಿಯಿಂದ ನಿಮಗೆ ತಿಳಿಯುವಂತೆ ಮಾಡುವೆ ”

ಆಗಂತುಕನು ವಿಲಾಸನ ಮೋರೆಯೆಡೆಗೆ ಚಕಿತನಾಗಿ ನೋಡಿದ.

ಆತನ ಮೋರೆಯ ಮೇಲೆ ಲೇಶ ಮಾತ್ರವೂ ಭಯದ ಚಿನ್ಹೆಯಿರಲಿಲ್ಲ. ಆದರೆ ವಿಜಯೆ ಮಾತ್ರ ಅಂಜಿದಳು. ತನ್ನ ಮನೆಯಲ್ಲಿ ಕುಳಿತು, ಮನೆಗೆ ಬಂದ ಅಪರಿಚಿತ ಅತಿಥಿಯೊಡನೆ ಈ ಏಕಾಂತದಲ್ಲಿ ಮಾಡಿದ ಅಶಿಷ್ಟ ಆಚರಣೆಯಿಂದ ಸಿಟ್ಟು ಲಜ್ಜೆಯುಂಟಾಗಿ ಮೋರೆ ಆರಕ್ತವಾಯಿತು. ಆಗಂತುಕನು ತುಸು ಹೊತ್ತು ವಿಲಾಸನೆಡೆಗೇ ನೋಡುತ್ತ ಕುಳಿತ. ನಂತರ ಆತನನ್ನು ಉಪೇಕ್ಷಿಸಿ, ವಿಜಯೆಯೆಡೆಗೆ ದೃಷ್ಟಿ ಹಾಯಿಸಿ ನುಡಿದ. "ನನ್ನ ಮಾವ ನೇನು ದೊಡ್ಡಮನುಷ್ಯನಲ್ಲ; ಆತನ ಪೂಜೆಯ ಸಿದ್ಧತೆಯೂ ಅಷ್ಟರಲ್ಲಿಯೇ ಇದೆ. ಆದರೂ ತಮ್ಮ ದರಿದ್ರ ಪ್ರಜೆಗಳಿಗೆ ಇಡೀ ವರ್ಷದಲ್ಲಿ ಇರುವ ಆನಂದೋತ್ಸವವೆಂದರೆ ಇದೊಂದೇ. ತಮಗೇನೋ ತುಸುತೊಂದರೆಯಾದರೂ ಆಗ ಬಹುದು; ಆದರೆ ಅವರಲ್ಲಿ ಕರುಣೆಯಿಟ್ಟು ಅಷ್ಟು ತೊಂದರೆಯನ್ನು ತಾವು ಸಹಿಸಲಾರಿರಾ?"

ವಿಲಾಸನು ಸಿಟ್ಟಿನಿಂದ ಹುಚ್ಚಾಗಿ ಎದುರಿಗಿರುವ ಮೇಜನ್ನು ಜೋರಿನಿಂದ ಗುದ್ದಿ ಗರ್ಜಿಸಿ ನುಡಿದ. "ಇಲ್ಲ. ಎಂದೆಂದೂ ಇಲ್ಲ. ಶಕ್ಯವೇ ಇಲ್ಲ. ಕೆಲ ಮೂರ್ಖ ಒಕ್ಕಲಿಗರ ಅವಿವೇಕಿ ವರ್ತನೆಯನ್ನು ಸಹಿಸಲು ಯಾರು ಜಮಿನುದಾರರಾಗಿರುವದಿಲ್ಲ. ಇನ್ನೇನಾದರೂ ಹೇಳತಕ್ಕದ್ದಿದ್ದರೆ ಹೇಳಿ, ಇಲ್ಲವಾದರೆ ಇಲ್ಲಿಂದ ಹೊರಬೀಳಿರಿ. ನಮ್ಮ ವೇಳೆಯನ್ನು ಹಾಳು ಮಾಡುತ್ತ ಕೂಡ್ರಬೇಡಿರಿ." ಎಂದು ಹೇಳಿ ಬಾಗಿಲ ಕಡೆಗೆ ಬೊಟ್ಟು ಮಾಡಿ ತೋರಿಸಿದ.

ಆತನ ಹುಚ್ಚು ಉದ್ವೇಗವನ್ನು ಕಂಡು ಕ್ಷಣಹೊತ್ತು ಆಗಂತುಕನು ಹತಾಶನಾದ. ಒಮ್ಮೆಲೇ ಆತನ ಬಾಯಿಂದ ಮಾತೇ ಹೊರಡಲಿಲ್ಲ. ಆದರೆ ತಂದೆಯಿಂದ ವಿಜಯೆ ಸುಮ್ಮನೆ ಶಿಕ್ಷಣ ಹೊಂದಿದ್ದಿಲ್ಲ; ಆಕೆ ಶಾಂತ ಹಾಗೂ ಗಂಭೀರಳಾಗಿ ವಿಲಾಸನೆಡೆಗೆ ನೋಡಿ ನುಡಿದಳು.

"ತಮ್ಮ ತಂದೆಯವರು ನನ್ನನ್ನು ಹೊಟ್ಟೆಯ ಮಗಳಂತೆ ಕಾಣುತ್ತಿರುವುದರಿಂದ ನನಗೆ ತೊಂದರೆಯಾದೀತೆಂದು ಪೂಜೆಗೆ ತಡೆ ಹಾಕಿರಬಹುದು. ಬರೇ ಮೂರು ನಾಲ್ಕು ದಿನ ತುಸು ಗದ್ದಲವನ್ನು ಸಹಿಸುವುದರಲ್ಲಿ ತೊಂದರೆಯಾದರೂ ಏನಿದೆ?"

ಮಾತು ಮುಗಿಯುವಷ್ಟರಲ್ಲಿಯೇ ವಿಲಾಸನು ದೊಡ್ಡದನಿಯಿಂದ

ವಿರೋಧಿಸ ಹತ್ತಿದ. "ಅದು ಅಸಹ್ಯವಾದ ಗದ್ದಲ. ಅದರ ಕಲ್ಪನೆಯೇ ನಿಮಗಿಲ್ಲ. ಆದುದರಿಂದ........"

ವಿಜಯೆಯು ಹಸನ್ಮುಖಿಯಾಗಿ "ಗದ್ದಲ ಬೇಕಾದರೆ ಆಗಲಿ, ಬರೀ ಮೂರು ದಿನ ಮಾತ್ರ ತಾನೇ? ಕಲಕತ್ತೆಯಲ್ಲಾಗಿದ್ದರೆ ಏನು ಮಾಡುತ್ತಿದ್ದಿರಿ? ಇಡೀ ದಿನ ತೋಪು ತುಬಾಕಿಯ ಗದ್ದಲವಾದರೂ ಸುಮ್ಮನೆ ಸಹಿಸುತ್ತಿದ್ದೆವಲ್ಲವೆ?" ಎಂದು ಹೇಳಿ ನಗನಗುತ್ತ ಆಗಂತುಕನಿಗೆ "ಹಿಂದಿನಂತೆ ಈಗಲೂ ಪೂಜೆ ಮಾಡಲು ಮಾವನವರಿಗೆ ತಿಳಿಸಿರಿ. ನನಗಾವ ತೊಂದರೆಯೂ ಇಲ್ಲ" ಎಂದಳು.

ಆಗಂತುಕ—ವಿಲಾಸಬಾಬು ಇಬ್ಬರೂ ಚಕಿತರಾಗಿ ವಿಜಯೆಯ ಮುಖದೆಡೆಗೆ ನೋಡುತ್ತ ಕುಳಿತರು.

"ಹಾಗಾದರೆ ತಾವೀಗ ಹೋಗಬಹುದು" ಎಂದು ವಿಜಯೆಯು ಕೈಯೆತ್ತಿ ನಮಸ್ಕಾರ ಮಾಡಿದಂತೆ ಮಾಡಿದಳು. ಅಪರಿಚಿತ ಸಜ್ಜನನು ಸಾವರಿಸಿ ಎದ್ದು ನಿಂತು ಆಭಾರ ಮನ್ನಿಸಿ ಪ್ರತಿ ನಮಸ್ಕರಿಸಿ, ವಿಲಾಸನಿಗೂ ಒಂದು ನಮಸ್ಕಾರ ಸಲ್ಲಿಸಿ ಹೊರಟು ಹೋದ. ಕ್ರುದ್ಧನಾದ ವಿಲಾಸ ಬೇರೆಡೆಗೆ ಮೋರೆಮಾಡಿ ನಿಂತ. ಆದರೆ ಈ ಅಪರಿಚಿತ ವ್ಯಕ್ತಿಯೇ ಅವರ ದೊಡ್ಡ ಸಾಲಗಾರ ಜಗದೀಶನ ಮಗ ನರೇಂದ್ರನಾಥನೆಂಬುದು ಇಬ್ಬರಲ್ಲಿ ಯಾರಿಗೂ ಗೊತ್ತಾಗಲಿಲ್ಲ.



ಆತ ಹೋದ ಎಷ್ಟೋ ಹೊತ್ತಿನ ತನಕ ವಿಜಯೆಯು ಅನ್ಯಮನಸ್ಕಳಾಗಿ ಸುಮ್ಮನೇ ಇದ್ದಳು. ಆಕೆ ಚಕಿತಳಾಗಿ ತಲೆಯೆತ್ತಿದಾಗ ಮೋರೆಯ ಮೇಲೆ ಕ್ಷೀಣವಾದ ಕೆಂಪು ಕಾಂತಿ ಕಾಣಿಸಿಕೊಂಡಿತು. ವಿಲಾಸನ ದೃಷ್ಟಿ ಬೇರೆಕಡೆಗೆ ಇದ್ದಿಲ್ಲವಾದರೆ ಆತನಿಗೆ ತುಂಬಾ ಆಶ್ಚರ್ಯವಾಗುತ್ತಿದ್ದುದರಲ್ಲಿ ಸಂದೇಹವಿಲ್ಲ. ವಿಜಯೆ ನಸುನಕ್ಕು ನುಡಿದಳು "ನಮ್ಮ ಮಾತು ಮುಗಿಯಲೇ ಇಲ್ಲ. ಹಾಗಾದರೆ ಆಸ್ತಿಯನ್ನು ಪೂರಾ ಜಪ್ತುಮಾಡುವುದೇ ತಂದೆಯವರ ಇಚ್ಛೆಯೇ?"

ವಿಲಾಸ ಕಿಡಕಿಯಿಂದ ಹೊರಗೆ ನೋಡುತ್ತಿದ್ದ. ಆತ ಅದೇ ಭಾವದಿಂದ "ಹೌದು" ಎಂದ.

"ಆದರಿಂದ ತೊಂದರೆಯೂ ಸಂಭವಿಸಲಾರದಷ್ಟೇ?"

"ಇಲ್ಲ"

"ಅವರೇನು ಆ ಹೊತ್ತಿಗೆ ಇತ್ತ ಚಿತ್ತೈಸಬಹುದೇ?

"ಏನೂ ಹೇಳಲು ಬರುವಂತಿಲ್ಲ"

"ನಿಮಗೇನು ಸಿಟ್ಟು ಬಂದಿತೆ?" ವಿಜಯೆಯು ನಕ್ಕು ಕೇಳಿದಳು.

ಈ ಸಾರೆ ವಿಲಾಸನು ಮೋರೆ ತಿರುಹಿ ಗಂಭೀರ ಸ್ವರದಿಂದ ನುಡಿದ "ಸಿಟ್ಟಾಗದಿದ್ದರೂ ತಂದೆಯ ಅಪಮಾನದಿಂದ ಮಗನು ದುಃಖಿತನಾಗುವುದು ಅಸ್ವಾಭಾವಿಕವೇನೂ ಅಲ್ಲ"

ವಿಜಯೆಗೆ ಈ ಮಾತಿನಿಂದ ವೇದನೆಯಾಯಿತು. ಆದರೂ ಆಕೆ ನಗು ಮುಖದಿಂದಲೇ "ಇದರಿಂದ ಅವರ ಮಾನ ಹಾನಿಯಾಯಿತೆಂಬ ತಪ್ಪು ತಿಳುವಳಿಕೆ ನಿಮ್ಮಲ್ಲಿ ಹೇಗೆ ಉಂಟಾಯಿತು? ಅವರು ನನಗೆ ಕಷ್ಟವಾದೀತೆಂದು ಬಗೆದಿರಬೇಕು. ಆದರೆ ನನಗೇನೂ ತೊಂದರೆಯಿಲ್ಲವೆಂದು ಆಗಂತುಕನಿಗೆ ಹೇಳಿದೆ. ನಡೆದದ್ದು ಇಷ್ಟೇ ಅಲ್ಲವೆ? ಇದರಲ್ಲಿ ಕೊಂಚವೂ ಮಾನಾಪಮಾನದ ಪ್ರಶ್ನೆಯೇ ಏಳುವದಿಲ್ಲ" ಎಂದಳು.

ಈ ಮಾತಿನಿಂದ ವಿಲಾಸನ ಗಾಂಭೀರ್ಯದಲ್ಲಿ ಲವಲೇಶವೂ ಕಡಿಮೆಯಾಗಲಿಲ್ಲ. ಆತ ತಲೆಯಲ್ಲಾಡಿಸಿ "ಈ ಮಾತು ತೋರಿಕೆಯದು. ನಿಮ್ಮ ಆಸ್ತಿಯ ವಹಿವಾಟನ್ನೆಲ್ಲ ನೀವೇ ವಹಿಸಿಕೊಳ್ಳಬೇಕೆಂದು ಯೋಚಿಸಿರಬೇಕು. ಅದಂತೂ ಒಂದು ರೀತಿಯಿಂದ ಒಳಿತೇ ಆಯಿತು. ಆದರೆ ಇನ್ನುಮೇಲೆ ನನ್ನ ತಂದೆಯವರಿಗೆ ಮಾತ್ರ ಎಚ್ಚರದಿಂದಿರಲು ತಿಳಿಸಬೇಕಾದೀತು. ಇಲ್ಲವಾದರೆ ಮಗನ ಕರ್ತವ್ಯಕ್ಕೆ ಚ್ಯುತಿ ಬಂದಂತೆ" ಎಂದ.

ಈ ಅಕಲ್ಪಿತ ಅಪ್ರಿಯ ಪ್ರತ್ಯುತ್ತರದಿಂದ ವಿಜಯೆ ವಿಸ್ಮಿತಳಾದಳು. ಕೆಲ ಹೊತ್ತು ಸ್ತಬ್ಧಳಾಗಿ ನಂತರ ದುಃಖದಿಂದ "ವಿಲಾಸ ಬಾಬು, ಇಷ್ಟು ಸಣ್ಣ ಸಂಗತಿಯನ್ನು ನೀವು ಈ ರೀತಿ ಬೆಳೆಸುವಿರೆಂದು ಯೋಚಿಸಿರಲಿಲ್ಲ. ಒಳ್ಳೇದು. ತಪ್ಪು ತಿಳುವಳಿಕೆಯಿಂದ ನಾನು ಅನ್ಯಾಯವನ್ನೇ ಮಾಡಿರಬಹುದಾದರೂ ನನ್ನ ತಪ್ಪನ್ನೊಪ್ಪಿಕೊಳ್ಳುವೆ. ಇನ್ನೆಂದೂ ಹೀಗೆ ಆಗದಂತೆ ನೋಡಿಕೊಳ್ಳುವೆ" ಎಂದು ಹೇಳಿ ನಿಟ್ಟುಸಿರೆಳೆದಳು. ತಪ್ಪನ್ನೊಪ್ಪಿಕೊಂಡರೆ ಆತ ಇನ್ನೇನೂ ಹೇಳಲಾರನೆಂದು ಆಕೆ ಭಾವಿಸಿದ್ದಳು. ಆದರೆ ಕಾಲು ಜಾರಿ

ದಾಗಲೇ ಕಲ್ಪಿಸೆಯುವದು ದುಷ್ಕರ ಪ್ರವೃತ್ತಿ. ಅಂತೆಯೇ ವಿಲಾಸ ಮಾರ್ನುಡಿದ. "ಹಾಗಾದರೆ ರಾಸಬಿಹಾರಿ ಕೊಟ್ಟ ಹುಕುಮನ್ನು ಅಮಾನ್ಯ ಮಾಡುವುದು ತನ್ನಿಂದ ಸರ್ವಥಾ ಸಾಧ್ಯವಿಲ್ಲವೆಂದು ಪೂರ್ಣಗಾಂಗುಲಿಗೆ ಹೇಳಿ ಕಳುಹಿಸು." ಈಗ ವಿಜಯೆಯ ಕಣ್ಣೆದುರು ಈ ವ್ಯಕ್ತಿಯ ಹಿಂಸ್ರ ರೂಪ ಕುಣಿಯಹತ್ತಿತು. ಆಕೆ ಕೆಲಹೊತ್ತು ಸುಮ್ಮನೆ ದಿಟ್ಟಿಸುತ್ತ ನಿಂತು ಸಾವಕಾಶವಾಗಿ "ಇದೇನು ದೊಡ್ಡ ಅಪರಾಧವಾಗಲಿಕ್ಕಿಲ್ಲವೆಂದು ನಂಬಿರುವೆ. ಇರಲಿ. ನಾನೇ ಒಂದು ಪತ್ರ ಬರೆದು ಅನುಮತಿ ಪಡೆಯುವೆ" ಎಂದಳು.

"ಈಗ ಪಡೆದರೂ ಒಂದೇ ಇಲ್ಲವಾದರೂ ಒಂದೇ. ಆತನಿಗೆ ತಲೆ ಎತ್ತಿ ತಿರುಗಲು ದಾರಿಯಿಡಬಾರದೆಂದು ನಿನ್ನ ಮನಸ್ಸಿದ್ದರೆ ನಾನೂ ಸಹ ಬೇರೊಂದು ದಾರಿ ಹಿಡಿಯಬೇಕಾದೀತು"

ವಿಜಯೆಗೆ ಸಿಟ್ಟು ಬಂದಿತಾದರೂ ತೋರಗೊಡದೆ ತಾಳ್ಮೆಯಿಂದ "ಆ ಅಪ್ರಿಯವಾದ ದಾರಿಯಾವುದೆಂದಾದರೂ ಒಮ್ಮೆ ಹೇಳಿಬಿಡಿ." ಎಂದಳು.

"ನಿಮ್ಮ ಜಮೀನಿನ ವ್ಯವಸ್ಥೆಯಲ್ಲಿ ತಂದೆಯವರು ಇನ್ನು ಮುಂದೆ ಕೈ ಹಾಕರು"

"ನಿಮ್ಮ ಹೇಳಿಕೆಯಂತೆಯೇ ನಡೆಯುವರೆಂದು ನಿಮ್ಮ ಭಾವನೆಯಿದೆಯೇ?"

"ಇಲ್ಲವೆಂದರೆ ಅಂತಹ ಪ್ರಯತ್ನವನ್ನಾದರೂ ನಾನು ಮಾಡಲೇಬೇಕಷ್ಟೇ"

"ಒಳ್ಳೇದು. ನೀವೇನು ಮಾಡಬಲ್ಲಿರೋ ಅದನ್ನೆಲ್ಲ ಮಾಡಿರಿ. ಆದರೆ ನಾನು ಮಾತ್ರ ಬೇರೆಯವರ ಧರ್ಮಾಧರ್ಮದಲ್ಲಿ ಎಂದೂ ಕೈ ಹಾಕುವದಿಲ್ಲ."

ಸ್ವರದಲ್ಲಿ ಮಾರ್ದವವಿದ್ದಿತಾದರೂ ಅದರಲ್ಲಿ ಅಡಕವಾದ ಕ್ರೋಧ ಕಂಡುಬರಲಿಲ್ಲ.

"ಆದರೆ ನಿಮ್ಮ ತಂದೆ ಇದ್ದರೆ ಈ ಮಾತನ್ನೆಂದೂ ಆಡಲು ಧೈರ್ಯ ಪಡುತ್ತಿರಲಿಲ್ಲ." ವಿಲಾಸನ ಸ್ವರದಲ್ಲಿ ತೀವ್ರತೆಯಿತ್ತು.

“ನನ್ನ ತಂದೆಯ ವಿಷಯ ನಿಮಗಿಂತ ನಾನು ಹೆಚ್ಚಿಗೆ ಬಲ್ಲೆ. ಆದರೆ ಅದನ್ನೆಲ್ಲ ತೆಗೆದುಕೊಂಡು ತರ್ಕಮಾಡುವದರಲ್ಲಾವ ಪ್ರಯೋಜನವೂ ಇಲ್ಲ. ನನ್ನ ಸ್ನಾನದ ಸಮಯವಾಯಿತು. ಹೋಗುತ್ತೇನೆ? ಎಂದವಳೇ ಕದವನ್ನೆಲ್ಲ ಮುಚ್ಚಿ ಹೊರಟಳು. ವಿಲಾಸನ ತೋರಿಕೆಯ ಸಭ್ಯತೆಯಲ್ಲ ಆಗಲೇ ಮಾಯವಾಗಿದ್ದಿತು. ಆತ ತನ್ನ ಸ್ವಭಾವಕ್ಕನುಗುಣವಾಗಿ ಅತಿಕಟುಸ್ವರದಿಂದ ಎಂದ “ಹೆಂಗಸರ ಜಾತಿಯೇ ಹೀಗೆ. ಉಂಡಮನೆ ಗಳ ಎಣಿಸುವವರು.”

ಇದನ್ನು ಕೇಳಿದೊಡನೆಯೇ ಮುಂದಿಟ್ಟ ಹೆಜ್ಜೆಯನ್ನು ಹಿಂದಿಟ್ಟು ವಿದ್ಯುದ್ವೇಗದಿಂದ ತಿರುಗಿನಿಂತು ಆತನನ್ನೇ ಕ್ಷಣಹೊತ್ತು ದಿಟ್ಟಿಸಿ ನೋಡಿ, ಮೌನವಾಗಿ ಹೊರಬಿದ್ದಳು. ಆಗ ವಿಲಾಸನ ಮೋರೆ ಕಪ್ಪಿಟ್ಟಿತು.

ಆತ ಪಿತೃ ಭಕ್ತಿಯ ಮೂಲಕವಾಗಿ ಈ ವಿವಾದ ನಡೆಸುತ್ತಿದ್ದನೆಂದು ಯಾರೂ ಭಾವಿಸಲಾಗದು. ಇಂತಹರಸ್ವಭಾವವೇ ಹೀಗೆ. ವಿಷಯವೇನೇ ಇರಲಿ, ಕಾರಣವೆಷ್ಟೇ ಕ್ಷುಲ್ಲಕವಿರಲಿ, ಅವರೂ ಅದರಲ್ಲಿ ತುಸು ಸಂಧಿದೊರೆಯಿತೆಂದರೆ ಸಾಕು; ದುರ್ಬಲರನ್ನು ದುಃಖಕ್ಕೀಡು ಮಾಡುವದರಲ್ಲಿ-ಅಂಜಿದವರನ್ನು ಇನ್ನಷ್ಟು ಅಂಜಿಸುವದರಲ್ಲಿ ಸ್ವಲ್ಪವೂ ಹಿಂದೆಮುಂದೆ ನೋಡರು. ಪರಪೀಡನೆಯೇ ಅವರಿಗೊಂದು ಆನಂದ. ಆದರೆ ವಿಜಯೆ ವಿಲಾಸನನ್ನು ಗಣಿಸದೆ ಹೊರಟುಹೋದನಂತರ ಅವನು ತನ್ನಷ್ಟಕ್ಕೆ ತಾನೇ ಹಳಹಳಿಸಹತ್ತಿದ. ಹಾಗೂ ಕೆಲಹೊತ್ತಿನ ವೇಲೆ ಹೊರಟು ಹೋದ.

ಮೂರನೆಯ ಜಾವದ ಸುಮಾರಿಗೆ ರಾಸಬಿಹಾರಿ ಮಗನ ಜೊತೆಗೆ ಬಂದ. ‘ಮಗೂ ಹೀಗೆ ಮಾಡಿದುದು ಒಳಿತಾಗಲಿಲ್ಲ. ನನ್ನ ಅಪ್ಪಣೆಯ ವಿರುದ್ಧ ಇನ್ನೊಂದು ಅಪ್ಪಣೆಯನ್ನಿತ್ತುದು ನನ್ನ ಅಪಮಾನ ಮಾಡಿದಂತೆ, ಇರಲಿ. ಆದುದಂತೂ ಆಯಿತು. ಆಸ್ತಿಯೆಲ್ಲ ನಿನ್ನದು. ಅದಕ್ಕಾಗಿ ಹೆಚ್ಚಿಗೆ ಹೇಳುವಂತಿಲ್ಲ, ಆದರೆ ಮೇಲಿಂದ ಮೇಲೆ ಹೀಗಾದಲ್ಲಿ ಮಾತ್ರ, ನನ್ನ ಗೌರವ ಕಾಯ್ದುಕೊಳ್ಳುವದಕ್ಕಾಗಿ ಇದರ ಆಡಳಿತದಿಂದ ದೂರವಾಗಲೇಬೇಕಾದೀತು ನೋಡು, ಈಗಲೇ ಹೇಳಿರುತ್ತೇನೆ”

ವಿಜಯೆ ಮೌನವಾಗಿದ್ದುದನ್ನು ಕಂಡು ಆಕೆ ತನ್ನ ಅಪರಾಧವನ್ನೊಪ್ಪಿದಳೆಂದು ಭಾವಿಸಿ ರಾಸಬಿಹಾರಿಯು ನಮ್ರನಾಗಿ ಆಸ್ತಿಯ ವಿಷಯವಾಗಿ

ಆಸ್ತಿಯ ವಿಷಯವಾಗಿ ಮಾತೆತ್ತಿದ. ಹೊಸ ಭೂಮಿಯನ್ನು ಕೊಂಡುಕೊಳ್ಳುವ ಸಲಹೆಯನ್ನಿತ್ತು ಆತ ಕೇಳಿದ—

"ಜಗದೀಶನ ಮನೆಯನ್ನು ನೀನು ಸಮಾಜಕ್ಕೆ ದಾನಕೊಟ್ಟಿರುವುದರಿಂದ ಈ ಪೂಜೆ ಮುಗಿದೊಡನೆಯೇ ಅದರ ಕಬ್ಜಾ ತೆಗೆದುಕೊಳ್ಳಬೇಕಾದೀತು. ಅದಕ್ಕೆ ನೀನು ಒಪ್ಪುವಿಯಲ್ಲವೇ?"

"ತಮ್ಮ ಮತವೇ ನನ್ನ ಮತ. ಅದರ ವಾಯಿದೆ ತೀರೀತೇ?"

"ತೀರಿ ಎಷ್ಟೋ ದಿನವಾಯಿತು. ಜಗದೀಶನು ತನ್ನ ಸಣ್ಣಪುಟ್ಟ ಸಾಲವನ್ನೆಲ್ಲ ತೀರಿಸುವ ದೆಸೆಯಿಂದ ಎಂಟುವರ್ಷದ ಕರಾರು ಮಾಡಿ ನಿನ್ನ ತಂದೆಯಿಂದ ಹತ್ತು ಸಾವಿರ ಸಾಲ ತೆಗೆದಿದ್ದ. ಅದಕ್ಕಾಗಿ, ಮೇಲಿನ ಅವಧಿಯಲ್ಲಿ ಸಾಲ ತೀರದಿದ್ದಲ್ಲಿ ತನ್ನ ಆಸ್ತಿಪಾಸ್ತಿ ತರಿ-ತೋಟ ಎಲ್ಲವೂ ನಿಮ್ಮದಾಗುವದು' ಎಂದು ದಸ್ತೈವೇಜು ಬರಕೊಟ್ಟಿದ್ದ. ಮಗೂ, ಈಗ ಒಂಬತ್ತನೆಯ ವರ್ಷ ನಡೆಯುತ್ತದೆ.''

"ಅವನ ಮಗ ಇಲ್ಲಿಯೇ ಇರುವನೆಂದು ಕೇಳಿರುವೆ. ಅವರಿಗೆ ಕರಿಸಿ ಇನ್ನೂ ಕೆಲದಿನ ಮುದ್ದತ್ತು ಕೊಟ್ಟು ಸಾಲ ತೀರಿಸುತ್ತಾನೋ ಹೇಗೆಂದು ನೋಡದರೆ ಒಳಿತಾಗುತ್ತಿತ್ತು."

ರಾಸಬಿಹಾರಿ ತಲೆಯಲ್ಲಾಡಿಸಿ ನುಡಿದ "ಆತ ಯಾವ ಉಪಾಯವನ್ನೂ ಮಾಡಲಾರ. ಮಾಡುವದಾದರೆ........

ಮಾತು ಮುಗಿಯುವಷ್ಟರಲ್ಲಿಯೇ ವಿಲಾಸ ಬಾಯಿ ಹಾಕಿದ. ಇಷ್ಟು ಹೊತ್ತು ಹೇಗೆ ತಡೆದಿದ್ದನೋ ದೇವರೇ ಬಲ್ಲ. "ಮಾಡುವದಾದರೂ ಮುದ್ದತ್ತೇಕೆ ಕೊಡಬೇಕು? ಕರಾರು ಬರೆದುಕೊಡುವಾಗ ಆ ಹೆಂಡಗುಡುಕನಿಗೆ ತಾನು ಹೇಗೆ ತೀರಿಸುವೆನೆಂಬುದರ ಅರಿವಿರಬಾರದಿತ್ತೆ?''

ವಿಲಾಸನೆಡೆಗೆ ವಿಜಯೆ ನೋಡಿದಳೊಮ್ಮೆ. ಮರಕ್ಷಣದಲ್ಲಿಯೇ ರಾಸಬಿಹಾರಿಯತ್ತ ಹೊರಳಿ ಶಾಂತತೆ ಹಾಗು ಸ್ಥಿರತೆಯಿಂದ ನುಡಿದಳು· "ಅವರು ತಂದೆಯವರ ಮಿತ್ರರಾದುದರಿಂದ ಆಸ್ತಿಯ ವಿಚಾರವಾಗಿ ಗೌರವದಿಂದ ನಡೆದುಕೊಳ್ಳಬೇಕೆಂದು ತಂದೆಯವರ ಆದೇಶವಿದೆ."

ವಿಲಾಸ ಪುನಃ ಗರ್ಜಿಸಿದ "ಏನೆಂದರೂ ಆತನೊಬ್ಬ...."

ರಾಸಬಿಹಾರಿ ಮಗನಿಗೆ ಮುಂದೆ ಮಾತಾಡಲು ಕೊಡಲಿಲ್ಲ. "ವಿಲಾಸ ಕುಸು ಸುಮ್ಮನಿರಬಾರದೇ?"

ಇಂತಹ ಹುಚ್ಚು ಭಾವನೆಗಳಿಗೆ ನಾನು ಎದೆಗೊಡಲಾರ. ಇದ ರಿಂದ ಯಾರು ಬೇಕಾದರೂ ಸಿಟ್ಟಾಗಲಿ, ಬಿಡಲಿ. ನಾನು ಸತ್ಯವನ್ನಾಡಲು ಎಂದೂ ಅಂಜುವದಿಲ್ಲ. ಕರ್ತವ್ಯವನ್ನು ನೆರವೇರಿಸಲು ಎಂಥ ಎಡರು ಬಂದರೂ ಲೆಕ್ಕಿಸುವದಿಲ್ಲ."

ರಾಸಬಿಹಾರಿಯು ಇತ್ತಂಡದವರನ್ನೂ ಸುಮ್ಮನುಳಿಸಬೇಕೆಂಬ ವಿಚಾ ರದಿಂದ ನಗುತ್ತ, ಮಧ್ಯದಲ್ಲಿ ಮೇಲಿಂದಮೇಲೆ ತಲೆಯಲ್ಲಾಡಿಸುತ್ತ "ಅದಂತೂ ನಿಜ, ಅದಂತೂ ನಿಜ. ನಮ್ಮ ಹಿರಿಯರ ಈ ಸ್ವಭಾವ ಒಮ್ಮೆಲೇ ಹೇಗೆ ಹೋದೀತು? ತಿಳಿಯಿತೇ ಮಗೂ? ಅದರಿಂದಲೇ ನಾನೂ ನಿನ್ನ ತಂದೆ ಯವರೂ ಸತ್ಯಧರ್ಮ ಸ್ವೀಕರಿಸಲು ಜನರೆಷ್ಟೇ ವಿರೋಧ ಮಾಡಿದರೂ ಹಿಂದೆ ಮುಂದೆ ನೋಡಲಿಲ್ಲ? ಎಂದನು.

"ತಂದೆ ತೀರುವಾಗ ನನ್ನ ಸಾಲಕ್ಕಾಗಿ ಬಾಲ್ಯಬಂಧುವಿನ ಮನೆ ಮಠ ಹರಾಜು ಹಾಕಿಸಬೇಡವೆಂದು ಆದೇಶವಿತ್ತಿದ್ದ" ವಿಜಯೆ ಯೆಂದಳು. ಹೀಗೆ ಹೇಳುತ್ತ ಹೇಳುತ್ತ ಆಕೆಯ ಕಣ್ಣು ಹನಿಗೂಡಿತು. ವಾತ್ಸಲ್ಯದ ತಂದೆಯ ಆದೇಶ ಆಗ ಅಸಂಗತವೆಂದು ಅನಿಸಿದ್ದರೂ ಈಗ ಅದೇ ಮೀರಲಾರದ ಅಪ್ಪಣೆಯಾಗಿ ಕುಳಿತಿತ್ತು.

"ಅದೇ ನಿಜವಾಗಿದ್ದರೆ ತಾನೇ ಸ್ವತಃ ಎಲ್ಲ ಸಾಲವೂ ಮುಟ್ಟಿತೆಂದು ಹೇಳಿ ಏಕೆ ಹೋಗಲಿಲ್ಲ?" ಎಂದು ವಿಲಾಸ ಕೇಳಿದ.

ವಿಜಯೆ ಈ ಪ್ರಶ್ನೆಗೆ ಉತ್ತರವನ್ನೇ ಕೊಡಲಿಲ್ಲ. ಆಕೆ ರಾಸಬಿಹಾರಿ ಯೆಡೆಗೆ ನೋಡುತ್ತ ಹೇಳಿದನು. ಜಗದೀಶ ಬಾಬುವಿನ ಮಗನನ್ನು ಕರಿಸಿ ಈ ಎಲ್ಲ ಸಂಗತಿ ಆತನಿಗೆ ತಿಳಿಸುವುದು ಉಚಿತವೆಂದು ನನಗನಿಸುತ್ತಿದೆ."

ರಾಸಬಿಹಾರಿಯಿಂದ ಉತ್ತರ ಬರುವಷ್ಟರಲ್ಲಿಯೇ ವಿಲಾಸನು ನಿರ್ಲಜ್ಜನಂತೆ ಬಾಯಿಹಾಕಿದ. "ಆತ ಇನ್ನೂ ಹತ್ತು ವರ್ಷದ ಮುದ್ದತ್ತು ಕೇಳಿದರೆ? ಅದನ್ನೂ ಕೊಡುವಿಯಾ? ಅಂದಬಳಿಕ ಸಮಾಜ ಸ್ಥಾಪನೆಯ ಆಸೆ ಹೊಳೆಯಲ್ಲಿ ಹುಣಸೇಹಣ್ಣು ತೊಳೆದಂತೆ."

ವಿಜಯೆ ಇದಕ್ಕೂ ಉತ್ತರ ಕೊಡಲಿಲ್ಲ. ಆಕೆ ರಾಸಬಿಹಾರಿಯನ್ನೇ ಕುರಿತು "ತಾವೊಮ್ಮೆ ಆತನನ್ನು ಕರೆದು ಈ ವಿಷಯದಲ್ಲಿ ಅವನ ಅಭಿಪ್ರಾಯವೇನೆಂಬುದನ್ನಾದರೂ ತಿಳಿದುಕೊಂಡರಾಗುತ್ತಿತ್ತು'' ಎಂದು ಬಿನ್ನವಿಸಿದಳು.

ರಾಸಬಿಹಾರಿ ಎಷ್ಟೆಂದರೂ ಧೂರ್ತ. ಮಗನ ಉದ್ಧಟ ಸ್ವಭಾವದಿಂದ ಮನಸ್ಸಿನಲ್ಲಿಯೇ ಸಿಟ್ಟಾಗಿದ್ದರೂ ತೋರಿಕೆಗೆ ಆತನ ಅಭಿಪ್ರಾಯವನ್ನೇ ಪುಷ್ಟಿಗೊಳಿಸುವ ದೃಷ್ಟಿಯಿಂದ ಒಂದು ಹಿನ್ನೆಲೆಯನ್ನು ರಚಿಸಿ ಶಾಂತ ಹಾಗೂ ಧೃಡವಾಗಿ ನುಡಿದ "ಮಗೂ, ನೋಡು, ನಿಮ್ಮಿಬ್ಬರ ಮತಭೇದದಲ್ಲಿ ಮೂರನೆಯವನೊಬ್ಬ ಬಾಯಿಹಾಕುವುದು ಸರಿಯಲ್ಲ; ಯಾಕೆಂದರೆ ನಿಮಗೆ ನಿಜವಾಗಿ ಏತರಿಂದ ಹಿತವಾದೀತೆಂದು ಇಂದಲ್ಲ, ನಾಳೆಯಾದರೂ ನೀವೇ ನಿಶ್ಚಯಿಸುವಿರಿ. ಈ ಮುದುಕನ ಮಾತೇ ನಡೆಯಬೇಕಾದುದಿಲ್ಲ. ನಿಜ ಹೇಳುವದೆಂದರೆ ನಿನ್ನ ಅಭಿಪ್ರಾಯವೇ ತಪ್ಪಿದೆಯೆಂದು ಹೇಳಬೇಕಾಗುತ್ತಿದೆ. ನಾನೇ ಅನೇಕಸಲ ಜಮೀನಿನ ವ್ಯವಸ್ಥೆ ನೋಡುವುದರಲ್ಲಿ ವಿಲಾಸನ ಮುಂದೆ ಸೋತಿದ್ದೇನೆ. ಈ ವಿಷಯದಲ್ಲಿ ಜಗದೀಶನ ಮಗನಿಗೆ ಹೆಚ್ಚು ಅವಶ್ಯಕತೆಯೋ, ನಿನಗೋ ಎಂಬುದನ್ನು ನೀನೇ ಯೋಚಿಸಿನೋಡು. ಆತನಲ್ಲಿ ಸಾಲ ತೀರಿಸುವ ಹುಮ್ಮಸವಿದ್ದರೆ ಆತನೊಮ್ಮೆಯಾದರೂ ಬಂದು ಯಾಕೆ ಯತ್ನಿಸಬಾರದಿತ್ತು? ನೀನು ಬಂದ ಸುದ್ದಿ ಆತನಿಗೆ ಗೊತ್ತಿರಲೇ ಬೇಕು. ಈಗ ನಾನಾಗಿಯೇ ಕರೆಸಿ ಕೇಳಿದರೆ ಅವನು ಬಹಳಷ್ಟು ಅವಕಾಶ ಕೇಳಬಹುದು. ಇದರಿಂದ ಸಾಲವೂ ತೀರುವಂತಿಲ್ಲ. ಅಲ್ಲದೆ ನಿಮ್ಮಿಬ್ಬರ ಸಮಾಜ ಸ್ಥಾಪನೆಯು ನನಸೂ ಕನಸಾದೀತು. ಮಗೂ, ನಿನಗೂ ಹೀಗೆ ಅನಿಸುವದಿಲ್ಲವೇ?''

ವಿಜಯ ಮೌನವಾಗಿದ್ದಳು. ಆಕೆಯ ಮನದೊಲವನ್ನು ವೃದ್ಧ ರಾಸಬಿಹಾರಿಯು ಅನುಮಾನಿಸಿ ಕೆಲಹೊತ್ತಿನ ನಂತರ "ಒಳ್ಳೇದು. ಆತನಿಲ್ಲದೆ ಯಾವ ಕೆಲಸವೂ ನಡೆಯುವಂತಿಲ್ಲ. ಆತನಾಗಿಯೇ ಒಮ್ಮೆ ಬಂದು ಮುದ್ದತ್ತು ಕೇಳಿದರೆ ಆಗ ವಿಚಾರಿಸಿ ನೋಡೋಣವಂತೆ. ಏನನ್ನುವಿ ಮಗೂ?'' ಎಂದನು.

ವಿಜಯೆ ತಲೆಯಲ್ಲಾಡಿಸಿ 'ಒಳ್ಳೇದು' ಎಂದಳು. ಆದರೂ ಆಕೆಯ ಮೋರೆಯೆಡೆಗೆ ನೋಡಿದರೆ ಆಕೆ ಈ ಸೂಚನೆಯನ್ನು ಮನಸಾ ಅನುಮೋದಿ

ಸಿಲ್ಲವೆಂದು ತಿಳಿಯುವಂತಿತ್ತು. ಇಂದು ರಾಸಬಿಹಾರಿಗೆ ವಿಜಯೆಯ ಸ್ವಭಾವ ಗೊತ್ತಾಯಿತು. ಈಕೆ ಚಿಕ್ಕವಳಾದರೂ ತಂದೆಯ ಆಸ್ತಿಗೆ ತಾನೇ ಮಾಲಕಳೆಂಬುದನ್ನು ಅರಿತಿರುವಳೆಂದೂ, ಈಕೆಯನ್ನು ವಶದಲ್ಲಿಟ್ಟು ಕೊಳ್ಳಲು ಕೆಲದಿನ ಬೇಕೆಂದೂ ಆತ ತಿಳಿದ. ಆದುದರಿಂದ ಈ ಸಣ್ಣ ಮಾತಿಗಾಗಿ ಹರಿಯುವ ತನಕ ಎಳೆಯುವುದು ಉಚಿತವಲ್ಲವೆಂದು ಭಾವಿಸಿ, ಸಾಯಂ-ಪ್ರಾರ್ಥನೆಯ ನೆವಮಾಡಿ ಎದ್ದ. ವಿಜಯೆ ಮೌನವಾಗಿ ನಮಸ್ಕರಿಸಿ ಆಸನ ಬಿಟ್ಟು ಎದ್ದುನಿಂತಳು. ಆತ ಆಶೀರ್ವದಿಸಿ ಹೊರಟ. ವಿಜಯೆಯು ಕ್ಷಣಹೊತ್ತು ಮೌನವಾಗಿ ನಿಂತು ವಿಲಾಸನಿಗೆ "ನಾನು ಬಹಳ ಪತ್ರ ಬರೆಯಬೇಕಾಗಿದೆ ನನ್ನೊಡನೆ ಏನಾದರೂ ಕೆಲಸವಿದೆಯೇ?" ಎಂದು ಕೇಳಿದಳು.

"ಇಲ್ಲ. ತಾವು ಹೋಗಬಹುದು."

"ಚಹಾ ತರಿಸಲು ಹೇಳಲೇ?"

"ಬೇಡ. ಅವಶ್ಯವಿಲ್ಲ."

"ಒಳ್ಳೇದು, ನಮಸ್ಕಾರ" ಎಂದವಳೇ ಒಮ್ಮೆ ಎರಡೂ ಕೈಜೋಡಿಸಿ ಕೊಂಡೇ ಕೋಣೆಯಿಂದ ಹೊರ ಹೊರಟಳು.

೬

ಸ್ವರ್ಗಸ್ಥ ಜಗದೀಶ ಬಾಬುವಿನ ಮನೆ ಸರಸ್ವತಿ ನದಿಯ ಆಚೆ ಮಗ್ಗಲಿಗಿತ್ತು. ಆ ಮನೆಯು ಹೊಂದಿದ ಹಳ್ಳಿಯಲ್ಲಿ ಇದ್ದರೂ ನದಿಯ ದಡದಲ್ಲಿ ಬೆಳೆದ ಬಿದಿರ ಮೆಳೆಗಳ ಮೂಲಕ ವನವೀರನ ಮನೆಯು ಮಾಳಿಗೆಯ ಮೇಲಿಂದಲೂ ಕಾಣಿಸುವಂತಿರಲಿಲ್ಲ. ಶರದೃತುವು ಕಳೆಯುತ್ತ ಬಂದುದರಿಂದ ಸರಸ್ವತಿಯಲ್ಲಿ ಮಳೆಯ ಮೂಲಕ ಬಂದ ನೆಗಸು ಇಳಿದಿದ್ದಿತು.

ಇಂದು ಸಾಯಂಕಾಲ ವಿಜಯೆ ಮುದಿಸೇವಕ ಕನ್ಹೈಸಿಂಹನನ್ನು ಕರೆದುಕೊಂಡು ಅಡ್ಡಾಡಲು ಹೊರಟಿದ್ದಳು. ಆಚೆಯ ದಡದಲ್ಲಿರುವ ವೃಕ್ಷಗಳ ಸಂದಿನಲ್ಲಿ ತೂರಿ ಬರುತ್ತಿದ್ದ ಅಸ್ತಮಿಸುತ್ತಿರುವ ಸೂರ್ಯನ ಆರಕ್ತ ಪ್ರಕಾಶವು ಆಕೆಯ ಮೋರೆಯ ಮೇಲೆ ಒಮ್ಮೊಮ್ಮೆ ಬಂದು ಬೀಳುತ್ತಿತ್ತು. ಅನ್ಯಮನಸ್ಕಳಾಗಿ ಎರಡೂ ದಡದಲ್ಲಿಯ ದೃಶ್ಯಗಳಲ್ಲಿ ಅಲ್ಲೊಂದು ಇಲ್ಲೊಂದು ನೋಡುತ್ತ ಉತ್ತರ ದಿಶೆಯಲ್ಲಿ ಮುಂದುವರಿದಂತೆ, ಗಳಗಳೆಂದ

ಕಟ್ಟಿದ ಪೂಲಿನೆಡೆಗೆ ದೃಷ್ಟಿ ಹೊರಳಿತು. ಅದನ್ನು ಲಕ್ಷ್ಯವಿಟ್ಟು ನೋಡಲು ಬಯಸಿ ಮುಂದೆ ಬಂದು ನಿಲ್ಲಲು, ಅನತಿದೂರದಲ್ಲಿಯೇ ಮೀನ ಹಿಡಿಯುವುದರಲ್ಲಿ ತಲ್ಲೀನನಾಗಿ ನಿಂತ ವ್ಯಕ್ತಿಯೊಬ್ಬನನ್ನು ಕಂಡಳು. ಕಾಲಿನ ಸಪ್ಪಳಕ್ಕೆ ಆತ ಹಿಂತಲೆಯೆತ್ತಿ ನೋಡಿ ನಮಸ್ಕರಿಸಿದ. ಸೂರ್ಯಕಿರಣವು ಅದೇ ಕಾಲಕ್ಕೆ ಸರಿಯಾಗಿ ಆಕೆಯ ಮೋರೆಯ ಮೇಲೆ ಬಿದ್ದಿತೋ ಇಲ್ಲವೊ ಗೊತ್ತಿಲ್ಲ. ಆದರೂ ನಾಲ್ಕೂ ಕಣ್ಣು ಕೂಡಿದೊಡನೆಯೇ ಆತನ ಬಿಳಿಯ ಮೋರೆ ಆರಕ್ತವಾಯಿತು. ಆ ವ್ಯಕ್ತಿ ಬೇರಾರೂ ಆಗಿರದೆ ಹಿಂದೊಮ್ಮೆ ಮಾವನ ವತಿಯಿಂದ ದೂರು ಹೇಳಲು ಬಂದವನೇ ಆಗಿದ್ದ. ಆತ ಹತ್ತಿರ ಬಂದು ನಗುಮೊಗದಿಂದ ಸಾಯಂಕಾಲದಲ್ಲಿ ತುಸು ಅಡ್ಡಾಡಿ ಬರಲು ನದಿಯ ತೀರ ಅಷ್ಟೇನೂ ಅಪಾಯಕಾರಿಯಲ್ಲ; ಆದರೆ ಈಗ ಇಲ್ಲಿ ಮಲೇರಿಯಾದ ತೊಂದರೆ ಬಹಳ ಈ ವಿಷಯವಾಗಿ ತಮ್ಮನ್ನು ಯಾರಾದರೂ ಎಚ್ಚರಿಸಿರಬಹುದಲ್ಲವೇ?'' ಎಂದ.

ವಿಜಯೆಯು ತಲೆಯಲ್ಲಾಡಿಸಿ "ಇಲ್ಲ'' ಎಂದಳು. ಮರುಕ್ಷಣದಲ್ಲಿಯೇ ತನ್ನನ್ನು ಸಾವರಿಸಿಕೊಂಡು ಮುಗುಳು ನಗುತ್ತ ನುಡಿದಳು "ಮಲೇರಿಯಾ ಇಂತಹರನ್ನೇ ಭಾಧಿಸಬೇಕೆಂದು ಹುಡುಕಿಕೊಂಡು ಬಾಧಿಸುವದಿಲ್ಲ. ನಾನಂತೂ ತಿಳಿಯದೆ ಬಂದೆ. ಆದರೆ ತಿಳಿದವರಾದ ನೀವು ನೀರಿನ ಹತ್ತಿರವೇ ಕುಳಿತಿರುವಿರಲ್ಲ! ಎಂತೆಂತಹ ಮೀನು ಹಿಡಿದಿರುವಿರೆಂಬುದನ್ನಾದರೂ ನೋಡುವಾ.''

ಆ ವ್ಯಕ್ತಿಯು ನಕ್ಕ. "ಕಂಡಲಿ ಮೀನು. ಆದರೆ ಈ ಎರಡು ತಾಸಿನಲ್ಲಿ ಹಿಡಿದದ್ದು. ಬರೇ ಎರಡೇ ಎರಡು. ಕಷ್ಟಕ್ಕೆ ಸರಿಯಾದ ಕೂಲಿಯೂ ಹುಟ್ಟಲಿಲ್ಲ. ಆದರೇನು ಮಾಡಲಿ? ತಮ್ಮಂತೆ ನಾನೂ ಈ ದೇಶಕ್ಕೆ ಹೊಸಬ. ಅಪರಿಚಿತ. ಸಮಯವನ್ನು ಹೇಗಾದರೂ ದೂಡಬೇಕಷ್ಟೇ?"

ವಿಜಯೆ ಗೋಣನಲ್ಲಾಡಿಸಿ ನಕ್ಕಳು. ''ನನ್ನದೂ ಸುಮಾರಾಗಿ ಅದೇ ಗತಿಯಾಗಿದೆ. ತಮ್ಮ ಮನೆಯು ಬಹುಶ: ಪೂರ್ಣ ಬಾಬುವಿನ ಮನೆಯ ಹತ್ತಿರವೇ ಇರಬಹುದಲ್ಲವೇ?''

''ಇಲ್ಲ" ಎಂದು ಕೈಯಿಂದ ನದಿಯ ಆಚೆಯ ದಡವನ್ನು ತೋರಿಸಿದ. ''ನನ್ನ ಮನೆ ದಿಘಡಾದಲ್ಲಿದೆ. ಇದೇ ಗಳುವಿನ ಪೂಲಿನಿಂದ ದಾಟಬೇಕು."

ಊರ ಹೆಸರು ಕಿವಿಗೆ ಬೀಳುತ್ತಲೇ ವಿಜಯೆಯು "ಹಾಗಾದರೆ ಜಗದೀಶ ಬಾಬುವಿನ ಮಗ ನರೇಂದ್ರನಾಥನ ಪರಿಚಯ ತಮಗಿರಬಹುದಲ್ಲವೇ'' ಎಂದು ಕೇಳಿದಳು.

ಆತ ಅಹುದೆಂದು ತಲೆಯಲ್ಲಾಡಿಸಿದ. ವಿಜಯೆ ಅತ್ಯಂತ ಕುತೂಹಲದಿಂದ ಒಮ್ಮೆಲೇ "ಅವರೆಂತಹ ಮನುಷ್ಯರು? ಅವರ ಬಗ್ಗೆ ತಮಗೇನು ಗೊತ್ತಿದೆ?'' ಎಂದು ಕೇಳಿದಳು.

ಆದರೆ ಬಾಯಿಂದ ಹೊರಟ ಈ ಅಶಿಷ್ಟವೆನಿಸಬಹುದಾದ ಪ್ರಶ್ನೆಯಿಂದ ಆಕೆ ಲಜ್ಜಿತಳಾದಳು. ಇದನ್ನು ಆತ ಕಾಣದಿರಲಿಲ್ಲ. ಆತ ನಗುತ್ತ "ಆತನ ಮನೆಯನ್ನಂತೂ ತಾವು ತೆಗೆದುಕೊಂಡಿರುವಿರಿ. ಈಗ ಅವನ ಪರಿಚಯದಿಂದ ನಿಮಗಾವ ಪ್ರಯೋಜನವಿದೆ? ಆತನ ಮನೆಯನ್ನು ವಶಪಡಿಸಿಕೊಂಡ ಸದುದ್ದೇಶವನ್ನು ಈ ನಾಡಿನ ಜನವೆಲ್ಲ ಬಲ್ಲದು"

"ಒಮ್ಮೆಲೇ ವಶಪಡಿಸಿಕೊಂಡರೇ? ಇಲ್ಲೆಲ್ಲ ಅದೇ ರೀತಿ ಸುದ್ದಿ ಹರಡಿದೆಯೇ?" "ಅದು ಹರಡುವಂತಹ ಮಾತೇ ಸರಿ. ನಿಮ್ಮ ತಂದೆಗೆ ಜಗದೀಶ ಬಾಬುವಿನ ಯಾವತ್ತು ಆಸ್ತಿ ಬರೆದು ಕೊಡಲ್ಪಟ್ಟಿತ್ತು. ಅಷ್ಟೊಂದು ಸಾಲ ತೀರಿಸುವ ಯೋಗ್ಯತೆ ಆತನ ಮಗನಲ್ಲಿಲ್ಲ. ಅಲ್ಲದೆ ಮುದ್ದತ್ತೂ ಮೀರಿದೆ-- ಎಂಬುದನ್ನು ಎಲ್ಲರೂ ಬಲ್ಲರು."

"ಹೇಗಿದೆ ಮನೆ?"

"ಹಾಳೇನಿಲ್ಲ. ತುಂಬಾ ದೊಡ್ಡ ಮನೆ. ವಶಪಡಿಸಿಕೊಂಡವರ ಉದ್ದೇಶ ಸಫಲವಾಗುವಂತಿದೆ. ತುಸು ಮುಂದೆ ಹೋದರೆ ಸಾಕು; ಅದೋ ಕಾಣುವಂತಿದೆ. ಹೋಗಬಹುದಲ್ಲವೇ?"

ವಿಜಯೆ ಮುಂದುವರಿದಳು. "ನೀವು ಊರಿನವರೇ ಆದುದರಿಂದ ಎಲ್ಲ ವಿಷಯವೂ ವಿದಿತವಿರಬಹುದು. ಇರಲಿ; ನರೇಂದ್ರ ಬಾಬುವು ವಿಲಾಯತಿಯಿಂದ ಮೇಲ್ಪಂಬರ ಪಡೆದು ಡಾಕ್ಟರಿ ಕಲಿತು ಬಂದಿದ್ದಾರೆಂದು ಕೇಳಿರುವೆ. ಅವರೆಲ್ಲಿಯಾದರೂ ಒಳ್ಳೇಸ್ಥಳ ನೋಡಿ ದವಾಖಾನೆ ಆರಂಭಿಸಿ ಹಣಗಳಿಸಿ, ಕೆಲ ಮುದ್ದತ್ತು ತೆಗೆದುಕೊಂಡು ತಂದೆಯ ಸಾಲ ತೀರಿಸುವಂತಿಲ್ಲವೇ?"

ವ್ಯಕ್ತಿ ಗೋಣನ್ನಲ್ಲಾಡಿಸಿದ. "ಹಾಗೆ ಶಕ್ಯವಿಲ್ಲ. ಆತನಿಗೆ ಉದ್ಯೋಗ ಮಾಡುವ ಇಚ್ಛೆಯೇ ಇಲ್ಲವೆಂದು ಕೇಳಿರುವೆ"

ವಿಜಯೆ ಚಕಿತಳಾದಳು. "ಹಾಗಾದರೆ ಆತನ ಯೋಚನೆಯಾದರೂ ಏನಿದೆ? ಇಷ್ಟೆಲ್ಲ ಖರ್ಚು ಮಾಡಿ ವಿಲಾಯತಿಗೆ ಹೋಗಿ ಕಷ್ಟಪಟ್ಟು ಕಲಿತದ್ದರ ಉದ್ದೇಶವಾದರೂ ಹೇಗೆ ಫಲಿಸೀತು? ಯಾವ ಕೆಲಸಕ್ಕೂ ಬಾರದವನೆಂದು ತೋರುತ್ತಿದೆ"

ಆ ಸಭ್ಯಗೃಹಸ್ಥ ನಸುನಕ್ಕ. "ಹಾಗೂ ಇರಬಹುದು. ಆದರೂ ನರೇಂದ್ರ ಬಾಬುವು ತಾನೇ ಹೊಸದೊಂದು ರೋಗನಿವಾರಣೆಯ ಆವಿಷ್ಕಾರವನ್ನು ಹುಡುಕಿ ತೆಗೆಯಬೇಕೆಂದು ಯೋಚಿಸಿದ್ದಾನಾಗಿ ಕೇಳಿದ್ದೇನೆ. ಯಾಕೆಂದರೆ ಅದರಿಂದ ಬಹಳಷ್ಟು ಮಂದಿಗೆ ಹಿತವಾದೀತೆಂದು ಅವನ ನಂಬುಗೆ. ಆತ ಹಗಲಿರುಳು ತರತರದ ಯಂತ್ರಗಳನ್ನು ತೆಗೆದುಕೊಂಡು ಪ್ರಯೋಗ ನಡೆಸಿರುವನಂತೆ"

"ಇದೊಂದು ಘನವಾದ ವಿಷಯ. ಆದರೆ ಮನೆ ಮಠ ಹೋದ ಮೇಲೆ ಆ ಯತ್ನ ಹೇಗೆ ಮಾಡಬಲ್ಲನು? ಇಂತಹ ಸ್ಥಿತಿಯಲ್ಲಿ ಆತ ಜೀವನೋಪಾಯ ಹುಡುಕುವುದು ಒಳಿತು. ಆತ ವಿಲಾಯತಿಗೆ ಹೋದುದರಿಂದ ಇಲ್ಲಿಯ ಜನ ಅವನಿಗೇನು ಬಹಿಷ್ಕಾರ ಹಾಕಿಲ್ಲವೆ?"

"ಅದಂತೂ ಅವಶ್ಯವಾಗಿ ಹಾಕಿದ್ದಾರೆ. ನನ್ನ ಮಾವ ಪೂರ್ಣಬಾಬು ಆತನಿಗೆ ಒಂದು ರೀತಿಯಿಂದ ಸಂಬಂಧಿಕನೇ ಆಗಬೇಕು. ಆದರೂ ಪೂಜಾದಿನಗಳಲ್ಲಿ ಆತನನ್ನು ತನ್ನ ಮನೆಗೆ ಕರೆಯುವ ಸಾಹಸ ಮಾಡಲಿಲ್ಲ. ಅದರಿಂದ ಆತನಿಗೇನೂ ಲಾಭ ಹಾನಿ ಇಲ್ಲ. ಯಾವಾಗಲೂ ತನ್ನ ಕೆಲಸದಲ್ಲಿಯೇ ಮಗ್ನನಾಗಿರುತ್ತಾನೆ. ವೇಳೆ ಸಿಕ್ಕಿತೆಂದರೆ ಚಿತ್ರ ಬಿಡಿಸುತ್ತಾನೆ—ಮನೆಯಿಂದ ಹೊರಗೆ ಬೀಳುವದೇ ಇಲ್ಲ. ಇದೋ ನೋಡಿ, ಅದೇ ಅವನ ಮನೆ" ಎಂದು ಹೇಳಿ ಬೆರಳಿನಿಂದ ವೃಕ್ಷಲತೆಗಳಿಂದ ಮುಚ್ಚಿದ ದೊಡ್ಡ ಮಹಡಿಯ ಮನೆಯೊಂದನ್ನು ತೋರಿಸಿದನು.

ಇದೇ ಹೊತ್ತಿಗೆ ಹಿಂದಿನಿಂದ ನೌಕರನು ಹರಕು ಮುರಕು ಬಂಗಾಲಿಯಿಂದ ತಾವು ಬಹಳ ದೂರ ಬಂದಿದ್ದೇವೆಂಬುದನ್ನೂ, ಮನೆ ಮುಟ್ಟಲು ಕತ್ತಲಾದೀತೆಂಬುದನ್ನೂ ತಿಳಿಸಿದನು.

ಆತನಿಗೂ ಊರಲ್ಲಿ ಹೋಗಬೇಕಾಗಿದ್ದುದರಿಂದ ಅವರು ಹಿಂದಿರುಗು ವಾಗ ಆತನೂ ಜೊತೆಯಾಗಿಯೇ ಬಂದ. ವಿಜಯೆಯು ಮನಸ್ಸಿನಲ್ಲಿ ಏನೇನನ್ನೋ ಯೋಚಿಸಿಕೊಂಡು "ಆತನಿಗೆ ಯಾವುದಾದರೂ ಆತ್ಮೀಯ ಕುಟುಂಬವೊಂದರಲ್ಲಿ ಆಶ್ರಯ ಸಿಗಲಾರದೇ? ಹೇಳಿ'' ಎಂದಳು.

"ಎಂದೆಂದಿಗೂ ಇಲ್ಲ."

ವಿಜಯೆ ತುಸು ಮುಂದಕ್ಕೆ ನಡೆದಳು. "ಆತ ಯಾರಲ್ಲಿಯೂ ಹೋಗುವದಿಲ್ಲವೆಂಬ ಮಾತು ದಿಟ. ಇಷ್ಟೇ ಅಲ್ಲ; ಈ ತಿಂಗಳ ಅಂತ್ಯದೊಳಗಾಗಿಯೇ ಮನೆ ಬಿಟ್ಟು ಕೊಡಲು ಆತನಿಗೆ ನೋಟೀಸು ಕೊಡಲಾಗಿದೆ ಬೇರೆ ಯಾರಾದರೂ ಆಗಿದ್ದರೆ ನಮ್ಮೊಡನೆ ಒಮ್ಮೆಯಾದರೂ ಹೇಳಿಕೊಳ್ಳಲು ಬರಬಹುದಿತ್ತು.''

"ಆತನಿಗೆ ಅವಶ್ಯವಿಲ್ಲದಿರಬಹುದು; ಇಲ್ಲವೆ ಹೋಗುವುದರಿಂದ ಲಾಭವಿಲ್ಲವೆಂದು ಬಗೆದಿರಬಹುದು. ತಾವಂತೂ ಈಗ ಆತನಿಗೆ ನಿಜವಾಗಿಯೂ ಮನೆಯಲ್ಲಿರಲು ಕೊಡಲಿಕ್ಕಿಲ್ಲ.''

"ಕೊಡಲಿಕ್ಕಿಲ್ಲವಾದರೂ ಕೆಲ ದಿನ ಅವಧಿ ಕೊಡಬಹುದು. ಎಷ್ಟೇ ಸಾಲ ಕೊಡುವದಿದ್ದರೂ ಒಬ್ಬನನ್ನು ಮನೆಯಿಂದ ಹೊರಡಿಸುವ ಮನಸ್ಸಾಗದು. ಆದರೆ ನಿಮ್ಮ ಮಾತು ಕತೆಯ ಮೇಲಿಂದ ನಿಮಗೆ ಅವನ ಪರಿಚಯವಿರಬಹುದೆಂದೆನಿಸುತ್ತಿದೆ. ನಿಜವಲ್ಲವೇ ಹೇಳಿ?"

ವ್ಯಕ್ತಿಯು ಬರೇ ನಕ್ಕ. ಇನ್ನೇನೂ ಮಾರ್ನುಡಿಯಲಿಲ್ಲ. ಅವರೆಲ್ಲ ಪೂಲಿನ ಹತ್ತರ ಮುಟ್ಟಿದರು. ಅದೇ ಹೊತ್ತಿಗೆ ಆತ ತನ್ನ ಸಣ್ಣ ಗಾಳವನ್ನು ತೆಗೆದು 'ಊರಿಗೆ ಹೋಗುವ ದಾರಿ ಇದೇ, ಎಂದು ಹೇಳಿ ಪುನಃ ಕೈಯೆತ್ತಿ ನಮಸ್ಕರಿಸಿ ಗಳುವಿನಿಂದಲೇ ರಚಿಸಿದ ಆ ಸಂಕದ ಮೇಲಿಂದ ಹೋಯ್ದಾಡುತ್ತ ಹೇಗೋ ಆಚೆಯ ಬದಿ ಸೇರಿ ಅಡವಿಯ ಹಾದಿಯಿಂದ ಅದೃಶ್ಯನಾದ.

ಬಾಲ್ಯದಿಂದಲೂ ಕನ್ನೈಸಿಂಹನು ವಿಜಯೆಯನ್ನು ಎತ್ತಿ ಆಡಿಸಿ ಬೆಳೆಸಿದ್ದುದರಿಂದ ಸಲಿಗೆ ಇತ್ತು. ಆತ ಹತ್ತಿರದಲ್ಲಿ ಬಂದು "ಮಗೂ, ಈ ಸದ್ಗೃಹಸ್ಥ ಯಾರು?" ಎಂದು ಕೇಳಿದ.

ಆಪರಿ ವಿಜಯೆಯ ಮನಸ್ಸು ಎಲ್ಲಿಲ್ಲಿಯೋ ಇದ್ದುದರಿಂದ ಆ ಮುದುಕನ ಪ್ರಶ್ನೆ ಆಕೆಯ ಕಿವಿಯ ಮೇಲೆ ಬೀಳಲೇ ಇಲ್ಲ. ಆ ಕತ್ತಲೆಯಲ್ಲಿ ನದೀ ತಟದ ಸಂಪೂರ್ಣ ಮೌನ ಮಾಧುರ್ಯವನ್ನು ಉಪೇಕ್ಷಿಸಿ ಸ್ವಪ್ನ ಸೃಷ್ಟಿಯಲ್ಲಿದ್ದವರಂತೆ ಆತ ಎಲ್ಲಿಯವ? ಇನ್ನಾವಾಗ ಆತನ ಭೆಟ್ಟಿಯಾದೀತು? ಎಂಬ ಒಂದೇ ಒಂದು ಮಾತನ್ನು ಯೋಚಿಸುತ್ತ ಮಾರ್ಗ ಕ್ರಮಿಸುತ್ತಿದ್ದಳು.

೭

''ನಾವೇ ಕೊಟ್ಟ ನೋಟೀಸನ್ನು ನಾನು ರದ್ದು ಮಾಡಲು ಹೋದರೆ ಉಳಿದ ರೈತರಿಗೆಲ್ಲ ಏನೆನಿಸಬಹುದೆಂದು ಒಮ್ಮೆ ಯೋಚಿಸಿ ನೋಡು ಮಗೂ'' ಎಂದು ರಾಸಬಿಹಾರಿಯೆಂದ.

''ಇದೇ ಅರ್ಥದ ಪತ್ರವೊಂದನ್ನು ಬರೆದು ಆತನ ಬಳಿಗೇಕೆ ಕಳಿಸಬಾರದು? ಆತ ಕೇವಲ ಅಪಮಾನವಾದೀತೆಂಬ ಅಂಜಿಕೆಯಿಂದಲೇ ಇಲ್ಲಿ ಬರುವ ಸಾಹಸ ಮಾಡುವದಿಲ್ಲವೆಂದು ನನಗನಿಸುತ್ತಿದೆ.''

''ಅಪಮಾನವೇತರದು?''

''ಆತನ ವಿನಂತಿಯನ್ನು ನಾವು ಮನ್ನಿಸಲಿಕ್ಕಿಲ್ಲವೆಂದು ಆತ ದಿಟವಾಗಿ ನಂಬಿರಬೇಕು.''

''ದೊಡ್ಡ ಬಾಜೀರಾಯನೆಂದು ಕಾಣುತ್ತಿದೆ. ನಾವೇ ಅಪಮಾನ ಸಹಿಸಿ ಅವನ ಬಾಗಿಲಿಗೆ ಹೋಗಿ ಈ ಮನೆಯಲ್ಲಿರಲು ವಿನಂತಿ ಮಾಡಬೇಕಾದೀತೆಂದು ಕಾಣುತ್ತಿದೆ.'' ಆತನ ದನಿಯಲ್ಲಿ ವ್ಯಂಗ ತುಂಬಿದ್ದಿತು.

''ಕಾಕಾಜೀ, ಹಾಗೆ ಮಾಡುವುದರಲ್ಲಾದರೂ ದೋಷವೇನಿದೆ? ಬೇಡದವನಿಗೆ ದಯತೋರುವುದರಲ್ಲಿ ನಾಚಿಕೆ ಏಕೆ?'' ಆಕೆಯ ಧನಿಯಲ್ಲಿ ದು:ಖ ಬೆರೆತಿತ್ತು.

''ಸರಿ, ಲಜ್ಜೆಯಿಲ್ಲದಿದ್ದರೆ ಇಲ್ಲ. ನಾವು ಸಂಕಲ್ಪಿಸಿದ ಸಮಾಜ ಸ್ಥಾಪನೆಯ ಕೆಲಸವೇನಾದೀತು, ನೀನೇ ಹೇಳು.''

''ಅದಕ್ಕೆ ಬೇರೊಂದು ಉಪಾಯವನ್ನು ಕಲ್ಪಿಸಬಹುದು.''

ರಾಸಬಿಹಾರಿಯು ಮನದಲ್ಲಿ ಸಿಟ್ಟುಗೊಂಡನಾದರೂ ತೋರಿಕೆಗೆ ತುಸು ನಕ್ಕು ನುಡಿದ. ''ನಿಮ್ಮ ತಂದೆ ಬಹಳಷ್ಟು ಹಣ ಗಳಿಸಿ ಹೋಗಿದ್ದಾನೆ. ನೀನು ಬೇರೊಂದು ಉಪಾಯ ಮಾಡಿದರೂ ಮಾಡಬಹುದೆಂಬುದನ್ನು ನಾನು ಬಲ್ಲೆ.

ಆದರೆ ಕಣ್ಣಿನಿಂದ ಇನ್ನೂ ತನಕ ಯಾರನ್ನು ನೋಡಿಲ್ಲವೋ ಅಂತಹನ ಬಗ್ಗೆ ನಮ್ಮೆಲ್ಲರ ಆಜ್ಞೆಯನ್ನು ಮೀರಿಯೂ ಸಹಾಯಮಾಡಬೇಕೆಂಬ ಇಚ್ಛೆ ನಿನಗೇಕೆ ಬಂದಿದೆ ಹೇಳು. ಮಗೂ, ದೇವರ ದಯೆಯಿಂದ ನಿನಗೆ ಇನ್ನೂ ಹತ್ತು ಕುಳಗಳಿವೆ, ರೈತರಿದ್ದಾರೆ. ಅವರಿಗೆಲ್ಲ ನೀನು ಇದೇ ರೀತಿ ವ್ಯವಸ್ಥೆ ಮಾಡಲಾಪೆಯಾ? ನಾವು ಮಾಡಿದರಾದರೂ ಅವರ ಕಲ್ಯಾಣವಾದೀತೇ? ನೀನೇ ನೋಡು ವಿಜಯಾ?"

"ಇದು ತಂದೆಯ ಕೊನೆಯ ಆದೇಶವೆಂದು ನಾನಂತೂ ಹೇಳಿರುವೆ. ಇಷ್ಟೋ ಅಲ್ಲದೆ ನಾನು ಕೇಳಿದ್ದೇನಂದರೆ...."

"ಕೇಳಿದ್ದೆನು?"

ಆಕೆ ಬರೇ ಅಪಹಾಸ್ಯಕ್ಕೆ ಮಾತ್ರ ಕಾರಣವಾದೀತೆಂಬ ಭಯದಿಂದ ಆತನ ತತ್ವ ಅಥವಾ ಆವಿಷ್ಕಾರಗಳನ್ನು ಹೇಳಲಿಲ್ಲ. ಆದರೆ ಆಕೆ ಹೇಳಿದ್ದಿಷ್ಟೇ—

"ಆತ ಬಹಿಷ್ಕೃತನೆಂದು ಕೇಳಿರುವೆ. ಆತ್ಮೀಯ ಕುಟುಂಬಗಳಲ್ಲೂ ಆತನಿಗೆ ಆಶ್ರಯ ಕೊಡುವವರಿಲ್ಲ. ಇಷ್ಟೇ ಅಲ್ಲದೆ 'ಗೃಹ-ಹೀನ' ಎಂಬ ಶಬ್ದದ ಅರ್ಥ ಮನಸ್ಸಿನಲ್ಲಿ ಬಂದೊಡನೆಯೇ ನನಗೆ ಅತೀವ ದುಃಖವೆನಿಸುತ್ತದೆ. ಕಾಕಾಜೀ,"

ರಾಸಬಿಹಾರಿಯು ತನ್ನ ಕಂಠವನ್ನು ಕರುಣೆಯಿಂದ ಗದ್ಗದವಾದಂತೆ ನಟಿಸಿ "ಈ ಚಿಕ್ಕ ವಯಸ್ಸಿನ ನಿನಗೆ ಈಪರಿ ದುಃಖವಾಗಬೇಕಾದರೆ ಮಗೂ ನನ್ನಂತಹ ಅಪರ ವಯಸ್ಸಿನ ಮುದುಕನಿಗೆ ಅದೆಷ್ಟು ಕಷ್ಟವಾಗಿರಬೇಡ! ನನ್ನ ಜೀವನದಲ್ಲಿ ಎಲ್ಲಕ್ಕೂ ಮೊದಲು ಇದೇ ಅಪ್ರಿಯ ಕೆಲಸವನ್ನು ನೆರವೇರಿಸುತ್ತಿದ್ದೇನೆಂದು ಭಾವಿಸಿರುವಿಯಾ? ಅಲ್ಲ; ಹಾಗೆಂದೂ ಅಲ್ಲ. ಕರ್ತವ್ಯವೆಂದರೆ ಯಾವಾಗಲೂ ಕರ್ತವ್ಯವೇ. ಅದರಮುಂದೆ ಹೃದಯದ ಯಾವ ದೂರೂ ಕೇಳಿಸಲಾರದು. ನನ್ನ ಮೇಲೆ ವನಮಾಲಿಯು ಹೊರಸಿಹೋದ ಭಾರವನ್ನು ನನ್ನ ಕೊನೆಯ ಉಸಿರಿರುವ ತನಕ ನಿರ್ವಹಿಸಲೇ ಬೇಕಾದೀತು. ಅದಕ್ಕಾಗಿ ಬೇಕಾದಂತಹ ಕಷ್ಟ ಹಾಗೂ ದುಃಖಗಳನ್ನು ಅನುಭವಿಸಬೇಕಾಗಿ ಬಂದರೂ ಸಹಿಸಬೇಕಾದೀತು. ಇಲ್ಲವಾದರೆ ಮಗೂ, ಈ ಎಲ್ಲ ಭಾರವನ್ನು ನೀನೇ ಹೊತ್ತು ನನ್ನನ್ನು ಈ ಜಂಜಾಟದಿಂದ ಬಿಡುಗಡೆ ಮಾಡಿ ಬಿಡು.

ಅಂದಹೊರತು ನಾನು ಯಾವ ರೀತಿಯಿಂದಲೂ ಈ ನಿನ್ನ ತಲೆಬುಡವಿಲ್ಲದ ವಿಜ್ಞಾಪನೆಯನ್ನು ಮನ್ನಿಸಲಾರೆ."

ವಿಜಯೆ ತಲೆಬಾಗಿಸಿ ಸುಮ್ಮನಿದ್ದಳು. ತಂದೆಯ ತಪ್ಪಿಗಾಗಿ ನಿರಪರಾಧಿ ಮಗನನ್ನು ಗೃಹಹೀನನನ್ನಾಗಿಸುವುದೂ— ಈ ಮುದುಕ ತನಗಿಂತ ಎಷ್ಟೋ ಪಾಲು ದುಃಖಸಹಿಸಿ ಕೇವಲ ಕರ್ತವ್ಯಕ್ಕಾಗಿ ಟೊಂಕಕಟ್ಟಿ ನಿಂತಿರುವದೂ—ಆಕೆಯ ಮನಸ್ಸಿಗೆ ಸರಿದೋರಲಿಲ್ಲ. ಅಷ್ಟೇ ಅಲ್ಲ; ,ನಿರುಪಾಯ ಹತಭಾಗ್ಯನ ಮೇಲೆ ಬಲಿಷ್ಠನ ಹೃದಯಹೀನ ನಿಷ್ಠುರತೆ ಇದೆಂದು ಆಕೆಗನಿಸಹತ್ತಿತು. ಆದರೆ ತನ್ನ ಇಚ್ಛೆಯನ್ನು ತೀವ್ರವಾಗಿ ಸಾಧಿಸಿಕೊಳ್ಳುವ ಸಾಹಸವೂ ಆಕೆಯಲ್ಲಿರಲಿಲ್ಲ. ಹಳ್ಳಿಯೊಂದರಲ್ಲಿ ಬ್ರಹ್ಮಮಂದಿರದ ಸ್ಥಾಪನೆಮಾಡಿ ಕೀರ್ತಿ ಪಡೆಯುವ ಹವ್ಯಾಸದಿಂದಲೇ ವಿಲಾಸನು ತಂದೆಯನ್ನು ಒತ್ತಾಯಪಡಿಸುವದಕ್ಕಾಗಿಯೇ ಹಟತೊಟ್ಟಿರುವನೆಂಬುದೂ ಆಕೆಗೆ ಗೊತ್ತಾಗದೆ ಹೋಗಲಿಲ್ಲ.

ರಾಸಬಿಹಾರಿ ಇನ್ನೇನೂ ಆಡಲಿಲ್ಲ. ವಿಜಯೆಯು ತುಸುಹೊತ್ತು ಮೌನವಾಗಿ ಕುಳಿತು ತನ್ನ ಮೂಕ ಸಮ್ಮತಿಯನ್ನು ವ್ಯಕ್ತಪಡಿಸಿದಳಾದರೂ ಆಕೆಯ ಪರದುಃಖಕಾತರ ಸ್ನೇಹ ಕೋಮಲ ಹೃದಯ ಒಳಗಿಂದೊಳಗೆ ಆ ಮುದುಕನ ಬಗ್ಗೆ ಅಶ್ರದ್ಧೆಯನ್ನೂ ಆತನ ಮಗನ ಬಗ್ಗೆ ತಿರಸ್ಕಾರವನ್ನೂ ಸೂಚಿಸಹತ್ತಿತು.

ರಾಸಬಿಹಾರಿ ಎಷ್ಟೆಂದರೂ ವ್ಯವಹಾರಸ್ಥ. ಒಡೆಯನನ್ನು ತರ್ಕದಲ್ಲಿ ಸಂಪೂರ್ಣ ಗೆದ್ದರೂ, ಆ ಗೆಲುವಿನ ಒತ್ತಡವನ್ನು ವಿಶೇಷವಾಗಿ ಹಾಕಬಾರದೆಂಬ ವ್ಯವಹಾರ ಚಾತುರ್ಯ ಆತನಲ್ಲಿತ್ತು. ಅಷ್ಟೇ ಅಲ್ಲದೆ, ತುಸು ಉದಾರತೆ ತೋರಿ ಮನೆಮಾಡುವ ಹೊತ್ತು ಯಾವುದಾದರೂ ಇದ್ದರೆ ಅದು ಇದೇ ಆಗಿದ್ದಿತು; ಆತ ವಿಜಯೆಯೆಡೆಗೆ ನೋಡಿ ತುಸು ನಕ್ಕು "ಮಗೂ, ಎಲ್ಲವೂ ನಿನ್ನದೇ ಇದೆ. ನೀನು ದಾನಮಾಡುತ್ತೀಯೆಂದರೆ ನಾನೇಕೆ ಅಡ್ಡ ಬರಲಿ? ಆದರೆ ನನ್ನ ಹೇಳಿಕೆ ಇಷ್ಟು. ವಿಲಾಸನ ಉದ್ದೇಶದಲ್ಲಿ ಆತನ ಸ್ವಾರ್ಥವಾಗಲೀ, ಇಲ್ಲವೆ ಆತನಿಗೆ ಸಿಟ್ಟುಬಂದಿತ್ತೆಂದಾಗಲೀ, ಭಾವಿಸಲಾಗದು. ತನ್ನದಾದ ನನ್ನ ಆಸ್ತಿ ಹಾಗೂ ನಿಮ್ಮ ತಂದೆಯ ಆಸ್ತಿ ಇವೆಲ್ಲ ಒಂದಾಗಿ ನಿಮ್ಮಿಬ್ಬರ ಕೈಸೇರುವದು. ಆಗ ನಿಮಗೆ ಬುದ್ಧಿ ಹೇಳಲು ಈ

ಮುದುಕನೂ ದೊರೆಯುವಂತಿಲ್ಲ. ಆಗ ನಿಮ್ಮಿಬ್ಬರಲ್ಲಿ ಮತಭೇದವಾಗಬಾರದೆಂದೂ, ನೀವು ನಿಮ್ಮ ಪತಿಯ ಎಲ್ಲ ಕರ್ತವ್ಯಗಳಲ್ಲಿ ಹಿತವಿದೆಯೆಂದೂ ಭಾವಿಸಿ ಅದನ್ನು ಶ್ರದ್ಧೆಯಿಂದ ಕಾಣಬೇಕೆಂದೂ ನನ್ನ ಬಯಕೆಯಿದೆ. ಇಲ್ಲವಾದರೆ ದಾನಮಾಡುವದಕ್ಕೆ ಅಥವಾ ದಯೆ ತೋರುವದಕ್ಕಾಗಿ ನನಗಾಗಲೀ ವಿಲಾಸನಿಗಾಗಲೀ ಯಾರೂ ಹೇಳಿಕೊಡಬೇಕಾಗಿಲ್ಲ. ಅಪಾತ್ರ ದಾನ ಮಾಡುವುದರಿಂದ ಲವಲೇಶವೂ ಪ್ರಯೋಜನವಿಲ್ಲವೆಂದು ನಿನಗೆ ತೋರಿಸಿಕೊಡುವುದೇ ನನ್ನ ಉದ್ದೇಶವಾಗಿದೆ. ನಾವು ಜಗದೀಶನ ಮಗನ ಮೇಲೆ ಯಾಕೆ ಎಳ್ಳಷ್ಟೂ ದಯೆದೋರುವದಿಲ್ಲವೆಂಬುದೂ- ಹಾಗೆ ಮಾಡಲು ಯಾಕೆ ಶಕ್ಯವಿಲ್ಲವೆಂಬುದೂ ನಿನಗೆ ವಿದಿತವಾಯಿತಲ್ಲವೇ?''

ಹೀಗೆ ಹೇಳಿ ಆ ವೃದ್ಧ ವಾತ್ಸಲ್ಯದ ನಗೆ ನಗುತ್ತ ವಿಜಯೆಯೆಡೆಗೆ ನೋಡುತ್ತ ನಿಂತ. ಈ ಸಾರಗರ್ಭಿತ ಹಾಗೂಯುಕ್ತಿ ಯುತ ಉಪದೇಶದ ಮುಂದೆ ತರ್ಕ ನಡೆಯಲಾರದೆಂದು ಆಕೆ ಸುಮ್ಮನುಳಿದಳು. ರಾಸ ಬಿಹಾರಿಯು ಪುನಃ ''ಮಗೂ, ನಮ್ಮ ವಿಲಾಸ ಚಿಕ್ಕವನಾದರೂ ಎಷು ಮುಂದಾಲೋಚನೆ ಮಾಡಿಯೇ ಕಾರ್ಯ ಮಾಡುತ್ತಾನೆಂಬುದು ಈಗ್ಲಾದರೂ ಗೊತ್ತಾಯಿತೇ? ನನ್ನ ಕೂದಲೆಲ್ಲ ಇದರಲ್ಲೇ ಹಣ್ಣಾಗಿದ್ದರೂ ಒಮ್ಮೊಮ್ಮೆ ಆತನ ವ್ಯವಸ್ಥೆಯ ಆಳವೇ ನನಗೆ ಹತ್ತದೆ ಚಕಿತನಾಗಬೇಕಾಗುತ್ತಿದೆ."

ವಿಜಯೆ ತಲೆಯಲ್ಲಾಡಿಸಿ ಅನುಮೋದಿಸಿದಳು ಮಾತ್ರ. ಆದರೆ ಮಾತನ್ನಾಡಲಿಲ್ಲ.

''ನಾಲ್ಕೂವರೆಯಾಯಿತು" ಎನ್ನುತ್ತ ರಾಸಬಿಹಾರಿಯು ಬೆತ್ತವನ್ನು ಹಿಡಿದು ಹೊರಡಲುದ್ಯುಕ್ತನಾಗಿ 'ಈ ಸಮಾಜ ಪ್ರತಿಷ್ಠೆಗೆ ನಮ್ಮ ವಿಲಾಸನೆಷ್ಟು ಆತುರನಿದ್ದಾನೆಂದು ಬಾಯಿಂದ ಹೇಳುವುದು ಸಾಧ್ಯವೇ ಇಲ್ಲ. ಆತನ ಧ್ಯಾನ–ಜ್ಞಾನ ಎಲ್ಲವೂ ಅದಕ್ಕೆ ಮೀಸಲಾಗಿದೆ. ಆ ಶುಭದಿನವನ್ನು ಈ ಕಣ್ಣು ಕಂಡೇ, ಕಣ್ಣು ಮುಚ್ಚುವಂತಾಗಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತಿದ್ದೇನೆ" ಎಂದು ಆತನೆರಡೂ ಕೈಜೋಡಿಸಿ ಬ್ರಹ್ಮನನ್ನು ನಮಿಸಿ ಹಲವು ಸಲ ನಮಿಸಿದ. ಬಾಗಿಲ ಹತ್ತರ ಬಂದವನು ಒಮ್ಮೆಲೇ ನಿಂತು 'ಅವ ನಾದರೂ ಬಂದು ಒಮ್ಮೆ ಭೆಟ್ಟಿಯಾಗಿದ್ದ ಎಂದರೆ ವಿಚಾರಿಸಿ ಏನನ್ನಾದರೂ

ಮಾಡಬಹುದಿತ್ತು. ಆದರೆ ಆತ ದುರ್ದೈವಿ! ಅತೀವ ದುರ್ದೈವಿ. ಅಪ್ಪನದೇ ಎಲ್ಲ ಸ್ವಭಾವ ಪೂರಾ ಬಂದು ಬಿಟ್ಟಿದೆಯೆಂದು ಕಾಣುತ್ತಿದೆ" ಎಂದು ಹೇಳ ಹೇಳುತ್ತಲೇ ಹೊರಗೆ ಹೊರಟು ಹೋದ.

ಏಕೋಭಾವದಿಂದ ಅಲ್ಲಿಯೇ ಕುಳಿತ ವಿಜಯೆಯು ಏನು ಯೋಚಿಸುತ್ತಿದ್ದಳೋ ಯಾರು ಬಲ್ಲರು? ಅಕಸ್ಮಾತ್ತಾಗಿ ಆಕೆಯ ದೃಷ್ಟಿ ಹೊರಗೆ ಹೊರಳಿದಾಗ ಸಂಜೆಯಾಗುತ್ತ ಬಂದುದು ತಿಳಿಯಿತು. ಆಗ ನದೀತೀರದ ಅಸ್ವಾಸ್ಥ್ಯಕರ ಹವೆಯು ತೀವ್ರವಾಗಿ ಆಕರ್ಷಿಸಹತ್ತಿದುದರಿಂದ ಆಕೆ ಎದ್ದು ಮುದುಕ ನೌಕರನನ್ನು ಕರೆದುಕೊಂಡು ವಾಯುಸೇವನೆಯ ನೆವದಿಂದ ಹೊರ ಹೊರಟಳು.

ಆ ವ್ಯಕ್ತಿ ಇಂದು ಕೂಡ ಅದೇ ಸ್ಥಳದಲ್ಲಿ ಕುಳಿತು ಮೀನ ಹಿಡಿಯುತ್ತಿದ್ದಿತು. ಬಹಳ ದೂರದಲ್ಲಿರುವಾಗಲೇ ಆತನನ್ನು ಕಂಡಿದ್ದರೂ, ಯೋಚನಾಮಗ್ನಳಾದ ಆಕೆ ಹತ್ತಿರ ಬಂದಾಗ ಗಮನಿಸದೆ ಮುಂದೆ ಸಾಗುತ್ತಿರುವುದನ್ನು ಕಂಡು ಹಿಂದಿದ್ದ ಕಹಾಸಿಂಹನು ಒಮ್ಮೆಲೇ "ಸಲಾಮು ಬಾಬುಗಳೇ ಏನಾದರೂ ಸಿಕ್ಕಿತೇ?" ಎಂದು ಕೂಗಿದ.

ಈ ಮಾತು ವಿಜಯೆಯ ಕಿವಿಗೆ ಬಿದ್ದುದೊಂದೇ ತಡ, ಆಕೆ ಆ ಪಾದಮಸ್ತಕ ಆರಕ್ತಳಾದಳು. ನಿಜವಾದ ನಂಟು ಬೆಳೆಯಲು ಬಹಳ ದಿನ ಹಾಗೂ ಬಹಳಷ್ಟು ಮಾತು ಕತೆ ನಡೆಯಬೇಕು ಎನ್ನುವವರಿರಬಹುದು. ಆದರೆ ಈ ಮಾತಿಗೆ ಅಷ್ಟೇನೂ ಮಹತ್ವಕೊಡಬೇಕಾದುದಿಲ್ಲ. ವಿಜಯೆಯು ತಿರುಗಿ ನಿಂತೊಡನೆಯೇ ಆ ವ್ಯಕ್ತಿಯು ಗಾಳವನ್ನು ಬದಿಗಿಟ್ಟು ಹತ್ತಿರ ಬಂದು ನಗುತ್ತ ನುಡಿದ. "ನಿಮಗೆ ಊರಿನ ಬಗ್ಗೆ ನಿಜವಾದ ಕಳಕಳಿಯಿದೆ. ಅಲ್ಲಿಯ ಮಲೇರಿಯಾವನ್ನು ಸಹ ಮೈಗಂಟಿಸಿಕೊಂಡ ಹೊರತು ನಿಮಗೆ ನಿದ್ದೆ ಬೀಳದೆಂದು ಕಾಣುತ್ತಿದೆ."

ವಿಜಯೆಯು ನಗುಮೊಗದಿಂದ ನುಡಿದಳು. "ನೀವು ಅದನ್ನು ಸಾಕ್ಷಾತ್ಕರಿಸಿಕೊಂಡಿರುವಿರೆಂದು ಕಾಣುತ್ತಿದೆ. ಆದರೆ ನಿಮ್ಮನ್ನು ಕಂಡರೆ ಹಾಗೇನೂ ತೋರದು,"

"ಡಾಕ್ಟರರಿಗೆ ಸಾಕ್ಷಾತ್ಕಾರವಾಗಲು ತುಸುದಿನ ಹತ್ತುತ್ತಿದೆ. ಇಂತಹ ತ್ರಾಸು-ತ್ರೋಂಪರೆ."

ವಿಜಯೆಯು ನಡುವೆಯೇ ಬಾಯಿಹಾಕಿ 'ಬಹುಶಃ ತಾವು ಡಾಕ್ಟರರೇ" ಎಂದು ಕೇಳಿದಳು.

ವ್ಯಕ್ತಿಯು ಅಪ್ರತಿಭನಾದುದರಿಂದ ಒಮ್ಮೆಲೇ ಉತ್ತರಕೊಡಲಾಗ ಲಿಲ್ಲ. ಆದರೆ ಮರುಕ್ಷಣವೇ ತನ್ನನ್ನು ಸಾವರಿಸಿಕೊಂಡು ಆತ ಚೇಷ್ಟೆ ಮಾಡುವವರಂತೆ "ಇಷ್ಟೂ ಗೊತ್ತಾಗದೇ? ನಾವೆಲ್ಲ ಅತಿದೊಡ್ಡ ಡಾಕ್ಟರ ನೊಬ್ಬನ ನೆರೆಯವರಲ್ಲವೇ? ಎಲ್ಲರಿಗೂ ಕೊಟ್ಟು ಉಳಿದ ನಂತರ ನಮ್ಮ ಪಾಳಿ ಬಂದೀತು-ಅಲ್ಲವೇ?" ಎಂದ.

ವಿಜಯೆ ತುಸು ತಡೆದಳು. "ಅವರು ನಿಮ್ಮ ನೆರೆಯವರಿಷ್ಟೇ ಅಲ್ಲ; ನಿಮ್ಮ ಆಪ್ತ ಮಿತ್ರರೂ ಇರಬೇಕೆಂದು ಊಹಿಸಿದ್ದೆ. ನಾನಂದುದನ್ನೆಲ್ಲ ನೀವು ಅವರ ಹತ್ತಿರ ಹೇಳಿರಬಹುದಷ್ಟೇ?"

ಆ ವ್ಯಕ್ತಿ ನಕ್ಕ. "ನೀವು ಅವನನ್ನು ಯಾವ ಕೆಲಸಕ್ಕೂ ಬಾರದ ದುರ್ದೈವಿಯೆಂದು ತಿಳಿದಿದ್ದೀರಿ. ಇದಂತೂ ಹಳೆಯ ಮಾತಾಯಿತು- ಎಲ್ಲರೂ ಬಲ್ಲ ಮಾತೇ ಸರಿ. ಈ ಹಳೆಯ ಹಾಡನ್ನು ಹೊಸ ರಾಗದಿಂದ ಪುನಃ ಆಲಾಪಿಸುವುದರ ಆವಶ್ಯಕತೆಯಾದರೂ ಏನು? ಆದರೆ ಆತ ನಿಮ್ಮನ್ನು ಒಮ್ಮೆ ಕಾಣಲು ಬರುವ" ಎಂದನು.

ವಿಜಯೆ ತನ್ನಲ್ಲಿಯೇ ನಾಚಿಕೆಪಟ್ಟುಕೊಂಡಳು. "ನನಗೆ ಭೆಟ್ಟಿ ಯಾಗುವುದರಿಂದ ಆತನಿಗೆ ಬರತಕ್ಕ ಲಾಭವಾದರೂ ಏನಿದೆ? ಆದರೆ ನಾನು ನಿಮ್ಮೊಡನೆ ಅವರ ಬಗೆಗೆ ಅಂತಹ ಮಾತನ್ನೆಂದೂ ಆಡಿರಲಿಲ್ಲ."

"ಹೇಳದೇ ಇದ್ದಿರಬಹುದು. ಹಾಗೆ ಹೇಳಿದರೂ ಅದರಲ್ಲಿ ತಪ್ಪೇನಿರ ಲಿಲ್ಲ."

"ಹೇಗದು?"

"ಮನೆಮಠ ದಿವಾಳಿ ತೆಗೆದವನಿಗೆ ಎಲ್ಲರೂ ದುರ್ದೈವಿಯೆನ್ನುತ್ತಾರೆ ನಾವೂ ಅನ್ನುತ್ತೇವೆ. ಮುಂದೆ ಹೇಳದಿದ್ದರೂ ಹಿಂದಂತೂ ಹೇಳಿಯೇ ತೀರುತ್ತೇವೆ."

ವಿಜಯೆ ನಗ ಹತ್ತಿದಳು. "ನೀವಂತೂ ಅವರ ಜೀವದ ಗೆಳೆಯ ರಲ್ಲವೇ?" ವ್ಯಕ್ತಿಯು ಗೋಣನಲ್ಲಾಡಿಸಿ "ಅದಂತೂ ಸರಿ. ಹೆಚ್ಚೇನು?

ನೀವೊಂದು ಒಳ್ಳೇ ಉದ್ದೇಶಕ್ಕಾಗಿ ಆತನ ಮನೆ ಮುಟ್ಟಗೋಲು ಹಾಕುತ್ತಿದ್ದೀರೆಂದು ಮಾತ್ರ ಸುಮ್ಮನೇ ಬಿಟ್ಟಿರುವೆ" ಎಂದನು.

ವಿಜಯೆಯು ಒಮ್ಮೆ ತಲೆಯೆತ್ತಿ ನೋಡಿದಳಿಷ್ಟೇ ಹೊರತು ಆ ವಿಷಯವಾಗಿ ಚಕಾರ ಶಬ್ದವನ್ನೂ ನುಡಿಯಲಿಲ್ಲ.

ಹೀಗೆಯೇ ಮಾತಾಡುತ್ತ-ಆಡುತ್ತ ಇಂದು ಅವರು ಬಹಳಷ್ಟು ಮುಂದೆ ಸಾಗಿದರು. ನದಿಯ ಆಚೆ ಜನರ ಒಂದು ತಂಡವು ಸಾಲಾಗಿ ನರೇಂದ್ರ ಬಾಬುವಿನ ಮನೆಯತ್ತ ಸಾಗಿದುದು ಕಂಡು ಬಂದಿತು. ಅವರಲ್ಲಿ ೧೫ ರಿಂದ ೫೦ ವಯಸ್ಸಿನ ಪ್ರೌಢರೇ ಇದ್ದರು. ವ್ಯಕ್ತಿಯು ಅವರನ್ನು ತೋರಿಸಿ "ಈ ಜನರು ಎಲ್ಲಿ ಹೋಗುತ್ತಾರೆಂದು ಬಲ್ಲಿರಾ? ನರೇಂದ್ರಬಾಬುವಿನ ಸಾಲೆಯಲ್ಲಿ ಓದಲು ಹೋಗುತ್ತಾರೆ'' ಎಂದನು.

ವಿಜಯೆ ಚಕಿತಳಾದಳು. "ಅವರು ಈ ಉದ್ಯೋಗವನ್ನೂ ನಡಿಸಿದ್ದಾರೆಯೇ? ಆದರೆ ಹಣತೆಗೆದುಕೊಂಡು ಕಲಿಸುತ್ತಾನೆಂದು ನನಗಂತೂ ಅನಿಸುವದಿಲ್ಲ.-- ನನ್ನ ಊಹೆ ಸರಿಯಲ್ಲವೇ?"

ವ್ಯಕ್ತಿಯು ನಗು ಮೊಗದಿಂದ ನುಡಿದ. "ನೀವು ಅವನನ್ನು ಸರಿಯಾಗಿ ಊಹಿಸಿದಿರಿ. ನಿರುಪಯೋಗಿ ಪ್ರಾಣಿಯ ಮಾತು ಯಾರಿಂದಲೂ ಬಚ್ಚಿಡಲಾಗುವದಿಲ್ಲ. ಆದರೆ ನಮ್ಮ ನಾಡಿನಲ್ಲಿ ನಿಜವಾದ ರೈತರಿಲ್ಲವೆಂದು ನರೇಂದ್ರನೆನ್ನುತ್ತಾನೆ. ಒಕ್ಕಲತನ ಒಂದು ದಂಧೆ. ಅದರಿಂದ ಜನ ವೇಳೆ-ಅವೇಳೆಯೆನ್ನದೆ ಒಂದೆರಡು ನೇಗಿಲ ಹೊಡೆದು, ಬೀಜ ಬಿತ್ತಿ ಆಕಾಶದೆಡೆಗೆ ಮೋರೆಮಾಡಿ ಕುಳಿತು ಬಿಡುತ್ತಾರೆ. ಹೀಗೆ ಮಾಡುವುದು ಒಕ್ಕಲತನವಲ್ಲ, ಸೋದರಿ ಎಂತಹ ಭೂಮಿಗೆ ಯಾವಕಾಲಕ್ಕೆ ಗೊಬ್ಬರ ಹಾಕಬೇಕು. ಯಾವುದಕ್ಕೆ ನಿಜವಾದ ಒಕ್ಕಲತವೆನ್ನುತ್ತಾರೆ—ಇವೆಲ್ಲ ಇಲ್ಲಿಯ ಒಕ್ಕಲಿಗರು ಅರಿಯರು. ವಿಲಾಯತಿಯಲ್ಲಿದ್ದು ಡಾಕ್ಟರೀ ಕಲಿಯುತ್ತಿದ್ದುದರ ಜೊತೆಗೇ ಈ ವಿದ್ಯೆಯನ್ನೂ ಆತ ಕಲಿತು ಬಂದಿದ್ದಾನೆ, ಒಳ್ಳೇದು, ಒಮ್ಮೆ ಆತನ ಸಾಲೆಯನ್ನು ನೋಡಲು ಹೋಗೋಣ. ಮೈದಾನದ ಮಧ್ಯದ ಗಿಡದಡಿಯಲ್ಲಿ ಅಪ್ಪ-ಮಗ-ಮೊಮ್ಮಗ ಎಲ್ಲರೂ ಒಂದೆಡೆ ಸೇರಿ ಕಲಿಯುವ ಸಾಲೆಗೆ—"

ವಿಜಯೆ ಒಂದೇ ಕಾಲಿನ ಮೇಲೆ ಸಿದ್ಧಳಿದ್ದಳು. ಆದರೆ ಮರುಕ್ಷಣದ ಲ್ಲಿಯೇ ತನ್ನ ಕುತೂಹಲವನ್ನು ಹತ್ತಿಕ್ಕಿ "ಇಲ್ಲ. ಈಗ ಬೇಡ. ಇಷ್ಟುದೊಡ್ಡ ಮನೆಬಿದ್ದಿರುವಾಗ ಆತನೇಕೆ ಮರದಡಿಯಲ್ಲಿ ಕಲಿಸುತ್ತಿದ್ದಾನೆ?" ಎಂದು ಕೇಳಿದಳು.

ಬಾಯಿಂದ ಹೇಳುವುದರಿಂದಾಗಲೀ, ಪುಸ್ತಕವನ್ನು ಓದಿಸುವುದ ರಿಂದಾಗಲೀ ಈ ಶಿಕ್ಷಣ ಕೊಡಲು ಬರುವಂತಿಲ್ಲ. ಸ್ವತಃ ಅವರಿಂದಲೇ ಇದೇ ರೀತಿ ಮಾಡಿಸಿದರೆ ಇಮ್ಮಡಿಯಲ್ಲ; ಐದರಷ್ಟು ಸಹ ಲಾಭ ಬರುತ್ತಿದೆಯೆಂದು ಪ್ರತ್ಯಕ್ಷ ತೋರಿಸುತ್ತಾರೆ. ಅದಕ್ಕಾಗಿ ಹೊಲ ಬೇಕು, ಮೈದಾನ ಬೇಕು. ಮೋರೆ ಮೇಲೆ ಮಾಡಿ ಮೋಡದತ್ತ ನೋಡುತ್ತ ಕೈಕಟ್ಟಿ ಕೂಡ್ರುವುದರಿಂದ ಪ್ರಯೋಜನವಿಲ್ಲ. ಆತನ ಸಾಲೆ ಮರದಡಿಯಲ್ಲಿರುವುದರ ಕಾರಣವು ತಿಳಿ ಯಿತೆ? ಅದನ್ನೊಮ್ಮೆ ನೀವು ಪ್ರತ್ಯಕ್ಷವಾಗಿ ನೋಡಿ ತೃಪ್ತಿಪಡೆಬೇಕು. ಇನ್ನೂ ಹೊತ್ತಿದೆ. ಇಂದೇ ಬೇಕಾದರೆ ಹೋಗಿ ಬರಬಹುದು–ಅದೋ ಅಲ್ಲಿಯೇ ಕಾಣುತ್ತಿದೆ"

ವಿಜಯೆಯ ಮುಖಮುದ್ರೆ ಸಾವಕಾಶವಾಗಿ ಗಂಭೀರ ಹಾಗೂ ಕಠಿಣ ವಾಗುತ್ತಿತ್ತು. "ಇಲ್ಲ ಈ ಹೊತ್ತು ಬೇಡ" ಎಂದಳು.

"ಒಳ್ಳೇದು ಹಾಗಾದರೆ. ತಮ್ಮನ್ನು ತುಸು ಅಲ್ಲಿಯ ತನಕ ಮುಟ್ಟಿಸಿ ಬರುವೆ" ಎಂದು ಹೇಳಿ ಆತ ಜೊತೆಯಾಗಿ ನಡೆಯಹತ್ತಿದ. ಐದಾರು ನಿಮಿಷ ಗಳ ವರೆಗೂ ಆಕೆ ತುಟಿ ಎರಡು ಮಾಡಲಿಲ್ಲ. ಆಕೆಯ ಮನಸ್ಸಿನಲ್ಲಿ ಅದೆಂ ತಹ ಲಜ್ಜೆಯೆನಿಸುತ್ತಿತ್ತೋ ಯಾರು ಬಲ್ಲರು. ಬಹಳಷ್ಟು ಯೋಚಿಸಿದರೂ ಕಾರಣವು ಬಗೆಹರಿಯಲಿಲ್ಲ. ವ್ಯಕ್ತಿಯೇ ಮಗದೊಮ್ಮೆ ಮಾತಾಡಿದ. "ನೀವು ಧರ್ಮದೃಷ್ಟಿಯವರು. ಅದೇ ದೃಷ್ಟಿಯಿಂದಲೇ ಆತನ ಮನೆಯನ್ನು ವಶ ಪಡಿಸಿಕೊಳ್ಳುತ್ತಿದ್ದೀರಿ. ಅಂದ ಬಳಿಕ ಒಳ್ಳೇ ಕೆಲಸಕ್ಕೆ ಉಪಯೋಗವಾಗು ತ್ತಿರುವ ಕೆಲ ಎಕರೆ ಹೊಲ ಬೇಸರವಿಲ್ಲದೇ ಬಿಟ್ಟು ಕೊಡಬಹುದಲ್ಲವೆ? ಎಂದು ಕೇಳಿ ಆತ ಮೃದುವಾಗಿ ನಗಹತ್ತಿದ.

ಆದರೆ ವಿಜಯೆ ಗಾಂಭೀರ್ಯದಿಂದ ಉತ್ತರ ವಿತ್ತಳು. "ಈ ರೀತಿ ಬಿನ್ನವಿಸಿಕೊಳ್ಳಲು ಅವರು ನಿಮಗೆ ಹೇಳಿರುವರೇನು?" ಎಂದು ಕೇಳಿ ಓರೆ ಗಣ್ಣಿನಿಂದ ಆತನೆಡೆಗೆ ನೋಡಿದಳು. ಆದರೆ ಆತನ ನಗುಮುಖದಲ್ಲಾವ ಅಭ್ಯಂತರವೂ ಕಂಡು ಬರಲಿಲ್ಲ.

ಈ ಮಾತು ಅವರಾಗಿ ಹೇಳುವುದು ಬೇಕಾಗುವದಿಲ್ಲ. ನಾವಾಗಿಯೇ ಹೇಳುವುದು ನಮ್ಮ ಕರ್ತವ್ಯವಾಗಿರುತ್ತದೆ. ಒಳ್ಳೆಯ ಕೆಲಸಕ್ಕೆ ನೆರವಾಗಬೇಕೆಂಬುದು ದೇವರೇ ಕೊಟ್ಟ ಅಧಿಕಾರ. ಹೊರತು ಇತರ ಮನುಷ್ಯರಲ್ಲ. ನಾನು ಅವನಸಲುವಾಗಿ ಕೇಳಿದ ಅನುಗ್ರಹಕ್ಕಾಗಿ ನಿಮಗೆ ಬೇಸರವಾಯಿತೆಂದೆನಿಸುತ್ತದೆ ಆದರೆ ಅದರಿಂದಾಗುವ ಲಾಭ ಯಾರ ಪಾಲಿನದಾಗುತ್ತಿತ್ತು; ಬಲ್ಲಿರಾ? ನಾಡಿನ ಅನ್ನ ಹೀನ ಒಕ್ಕಲಿಗರಿಗೇ ದೊರೆಯುತ್ತಿತ್ತು. ದರಿದ್ರನು ದೇವರದೇ ವಿಶಿಷ್ಟ ಮೂರ್ತಿಯೆಂದು ನಮ್ಮ ಶಾಸ್ತ್ರ ಸಾರುತ್ತಿದೆ. ಆತನ ಸೇವೆ ಮಾಡುವ ಅಧಿಕಾರ ಎಲ್ಲರಿಗೂ ಇದೆ. ಅಂತಹ ಅಧಿಕಾರ ನರೇಂದ್ರನ ಹತ್ತರ ನಾನೇಕೆ ಬೇಡಲು ಹೋಗಲಿ?" ಎಂದು ಹೇಳಿ ಆತ ನಗಹತ್ತಿದ.

ವಿಜಯೆಯು ಹೋಗ ಹೋಗುತ್ತಲೇ ನುಡಿದಳು. "ನಿಮ್ಮ ಮಿತ್ರನೀನು ಇವರ ಸಲುವಾಗಿ ಇಲ್ಲಿಯೇ ಕುಳಿತುಕೊಳ್ಳುವಂತಿಲ್ಲ."

"ಇಲ್ಲ. ಆದರೂ ಈ ಎಲ್ಲ ಹೊಣೆಯನ್ನು ನನ್ನ ಮೇಲೆಯೇ ಹೊರಿಸಿ ಹೋಗಬಹುದು."

ವಿಜಯೆಯ ತುಟಿಯಲ್ಲಿ ಒಂದು ಕ್ಷೀಣ ನಗೆ ಕಾಣಿಸಿಕೊಂಡಿತು. ಆದರೂ ಆಕೆ ಅತ್ಯಂತ ಗಂಭೀರ ಸ್ವರದಿಂದ "ನಾನೂ ಹೀಗ್ರೆಯೆ ಅನುಮಾನಿಸಿದ್ದೆ" ಎಂದಳು.

"ಅನುಮಾನಿಸುವಂತಹದೇ ಸರಿ."

ವಿಜಯೆಯು ಈ ನಗೆಯಲ್ಲಿ ತಾನೂ ದನಿಗೂಡಿಸಲು ಬಗೆದಳಾದರೂ ಹಾಗೆ ಮಾಡಲು ಸಮರ್ಥಳಾಗಲಿಲ್ಲ. ಆಕೆ ತುಸು ಮುಂದೆ ಹೋಗಿ ಒಮ್ಮೆಲೇ "ನೀವಾದರೂ ನಿಮ್ಮ ಗೆಳೆಯರಿಗೆ ಇಂಬುಗೊಡಬಹುದಲ್ಲ!"

ಆದರೆ, ನಾನೇನೂ ಇಲ್ಲಿರುವದಿಲ್ಲ ಬಹುಶಃ ಇನ್ನೊಂದು ವಾರದೊಳಗಾಗಿಯೇ ಹೋಗಬಹುದು"

ವಿಜಯೆ ಮನದಲ್ಲಿ ಗಾಬರಿಯಾದಂತಾದಳು. "ಎಷ್ಟೆಂದರೂ ಮನೆ ಅಲ್ಲಿ ಇನಾವಹಾಸ್ತರಿಂದ ಬರಹೋಗುತ್ತ ಉಳಿಯಬೇಕಾದೀತು."

ವ್ಯಕ್ತಿ ತಲೆಯಲ್ಲಾಡಿಸಿದ. "ಇಲ್ಲ. ನಾನು ತಿರುಗಿ ಬರುವ ಅವಶ್ಯಕತೆ ಇಲ್ಲ."

ಆಕೆಯ ಹೃದಯದಲ್ಲಿ ಕೋಲಾಹಲವೆದ್ದಿತು. ಈ ವಿಷಯವಾಗಿ ಪುನಃ ಪುನಃ ಪ್ರಶ್ನೆ ಕೇಳುವದು ಸಮಂಜಸವಲ್ಲವೆಂದು ತಿಳಿದಳು. ಕುತೂಹಲ ಕಡಿಮೆಯಾಗಲಿಲ್ಲ; "ಮನೆಯ ಭಾರ ಹೊರುವವರು ಬೇರೆಯಾರಾದರೂ ಇದ್ದಿರಬೇಕು." ವ್ಯಕ್ತಿಯು ನಕ್ಕ. "ಇಲ್ಲಿ ಅಂತಹರು ಯಾರೂ ಇಲ್ಲ."

"ಹಾಗಾದರೆ ತಂದೆ ತಾಯಿ?"

"ನನವರೆನ್ನುವವರು ಯಾರೂ ಇಲ್ಲ.---ಇದೋ, ನಾವೆಲ್ಲ ನಿಮ್ಮ ಮನೆಯಮುಂದೆ ಬಂದೆವು. ಹೋಗಿ ಬರುತ್ತೇನೆ. ನಮಸ್ಕಾರ" ಎಂದು ಹೇಳಿದ. ಅಲ್ಲಿಯೇ ತಡೆದ.

ಪುನಃ ಆತನೆಡೆಗೆ ನೋಡುವುದು ವಿಜಯೆಯಿಂದಾಗಲಿಲ್ಲ. ಆದರೂ ಮಿದುವಾಗಿ ಒಳಗೆ ಬರುವದಿಲ್ಲವೇನ್ರೀ" ಎಂದು ಕೇಳಿದಳು.

"ಇಲ್ಲ. ತಿರುಗಿ ಹೋಗಲು ಬಹಳ ಕತ್ತಲೆಯಾದೀತು. ನಮಸ್ಕಾರ."

ವಿಜಯೆ ಕೈಯೆತ್ತಿ ನಮಸ್ಕರಿಸಿ ಒಂದು ಮಾತು ಹೇಳಿದಳು. ಹಾಗೆ ಹೇಳುವಾಗ ಆಕೆಗೆ ತುಂಬ ಸಂಕೋಚವೆನಿಸಿತು. "ತಾವು ತಮ್ಮ ಮಿತ್ರರಿಗೊವೇ, ರಾಸಬಿಹಾರಿಯನ್ನು ಕಾಣಲು ಹೇಳಲಾರಿರಾ?" ಎಂದಳು.

ವ್ಯಕ್ತಿಗೆ ಆಶ್ಚರ್ಯವೆನಿಸಿತು. "ಆತನಹತ್ತರ ಏನು ಕೆಲಸ?"

"ಅವರೇ ತಂದೆಯ ಆಸ್ತಿಪಾಸ್ತಿಯ ಆಡಳಿತೆ ನೋಡುತ್ತಾರೆ."

"ಅದನ್ನು ಬಲ್ಲೆ. ಆದರೆ ಅವನ ಹತ್ತರ ಹೋಗುವುದೇಕೆ?"

ವಿಜಯೆ ಈ ಪ್ರಶ್ನೆಗೆ ಇನ್ನೇನೂ ಉತ್ತರ ಕೊಡಲಿಲ್ಲ. ವ್ಯಕ್ತಿಯು ತುಸುಹೊತ್ತು ಉತ್ತರದ ಪ್ರತೀಕ್ಷೆ ಮಾಡಿದ. ನಂತರ "ನನಗೆ ಹೋಗಲು ತಡವಾಗುತ್ತಿದೆ, ಹೋಗಲೇ ಎಂದು ಕೇಳಿ ತೀವ್ರವಾಗಿ ಹೆಜ್ಜೆಗಳನ್ನು ಹಾಕುತ್ತ ಹೋದ."

೮

ವಿಜಯೆಯ ಮನೆಯ ಹತ್ತಿರದ ಈ ತೋಟ ಈ ಭಾಗದಲ್ಲಿ ಬಹಳ ದೊಡ್ಡದಿತ್ತು. ನಿಬಿಡವಾದ ಮಾವು ಹಲಸು ಬೆಳೆದುದರಿಂದ ಅಲ್ಲಿ ಕತ್ತಲೆ ಹೆಚ್ಚಾಗಿತ್ತು. 'ಮಗೂ, ಈಗ ಸುಸ್ತಾದರೂ ರಾಜಮಾರ್ಗದಿಂದಲೇ ಹೋಗುವುದು ಒಳಿತೆಂದು ಕಾಣುತ್ತಿದೆ, ಎಂದು ಮುದಿ ನೌಕರ ನುಡಿದ.

ವಿಜಯೆ ಈ ಎಲ್ಲ ಮಾತುಗಳಿಗೆ ಲಕ್ಷ್ಯಕೊಡುವ ಮನಸ್ಥಿತಿಯಲ್ಲಿರ ಲಿಲ್ಲ. ಆಕೆ "ಇಲ್ಲ" ಎಂದಿಷ್ಟೇ ಹೇಳಿ ಅದೇ ಹಾದಿಯಿಂದ ಮುಂದೆ ಸಾಗಿದಳು. ಆಕೆಯ ಮನದಲ್ಲಿ ಎರಡು ಸಂಗತಿ ಕುದಿಯುತ್ತಿತ್ತು. ಆತನೊಡನೆ ಇಷ್ಟೊಂದು ಮಾತುಕತೆಯಾದರೂ, ಸ್ತ್ರೀ ಸಹಜ ಲಜ್ಜೆಯಿಂದ ಆತನ ಹೆಸರನ್ನು ಕೇಳಲಿಕ್ಕಾಗಲಿಲ್ಲವಲ್ಲ ಎಂಬುದು ಒಂದು. ಆತ ಮುಂದೆ ಎಲ್ಲಿ ಹೋಗುವನೆಂದು ಕೇಳಬೇಕೆಂದು ಹಲವು ಸಲ ಯೋಚಿಸಿಕೊಂದಿದ್ದರೂ ಕೇಳಲಿಕ್ಕಾಗದಿದ್ದುದು ಇನ್ನೊಂದು. ಆತ ಹೇಗೇ ಇರಲಿ, ತುಂಬಾ ಓದಿದವನೆಂದು ಆಕೆ ಅರಿತಿದ್ದಳು. ಹಳ್ಳಿಯಲ್ಲಿ ಹುಟ್ಟಿದವನಾದರೂ ನಿಸ್ಸಂಕೋಚವಾಗಿ ಗೊತ್ತು-ಪರಿಚಯವಿಲ್ಲದ ಕುಲೀನ ಸ್ತ್ರೀಯೊಡನೆ ಮಾತನಾಡುವ ಅಭ್ಯಾಸ ಆತನಿಗಿದೆ. ಬ್ರಾಹ್ಮಸಮಾಜದಲ್ಲಿರದ ಈತನು ಈ ಶಿಕ್ಷಣವನ್ನೆಲ್ಲಿ ಪಡೆದಿರಬಹುದೆಂದು ಯೋಚಿಸುತ್ತಲೇ ಮನೆಯೊಳಕ್ಕೆ ಕಾಲಿಡುವಷ್ಟರಲ್ಲಿ, ವಿಲಾಸಬಾಬುವು ದಿವಾಣಖಾನೆಯಲ್ಲಿ ಬಹಳ ಹೊತ್ತಿನಿಂದ ದಾರಿ ಕಾಯುತ್ತ ಕುಳಿತಿರುವನೆಂದು ಪರೇಶನ ತಾಯಿ ಹೇಳಿದಳು. ಈ ಸುದ್ದಿ ಕೇಳಿದೊಡನೆಯೇ ಆಕೆಗೆ ಬೇಸರ ವಿರಕ್ತಿಗಳುಂಟಾದವು. ಅಂದು ಸಿಟ್ಟು ಮಾಡಿಕೊಂಡು ಹೋಗಿ ಇನ್ನೂತನಕ ಬಾರದ ವ್ಯಕ್ತಿ ಈತನೇ ಆಗಿದ್ದ. ವಿಲಾಸಬ್ಬಾಬು ಹಾಗೂ ಆ ವ್ಯಕ್ತಿಯ ಮಧ್ಯದಲ್ಲಿ ಆಕಾಶ ಪಾತಾಲಗಳ ಅಂತರವಿದೆಯೆಂದು ಆಕೆ ಭಾವಿಸಿದಳು. ಆಕೆ ಬೇಸರದ ದನಿಯಿಂದ "ಅವನಿಗೆ ನಾನು ಬಂದ ಸುದ್ದಿ ಹತ್ತಿದೆಯೇ? ಚಹಾ ತೆಗೆದುಕೊಂಡಿದ್ದರೋ ಎಂದಾದರೂ ಕೇಳಿದ್ದಿರಾ?" ಎಂದು ಕೇಳಿದಳು.

"ಕೇಳದೆ ಏನು? ನೀವು ಬಂದಮೇಲೆ ಸಂಗಡಲೇ ತೆಗೆದುಕೊಳ್ಳುವೆವೆಂದು ಹೇಳಿದ್ದಾರೆ."

ಆ ಮನೆಗೆ ವಿಲಾಸನೇ ಭಾವೀ ಅಧಿಕಾರಿಯೆಂದು ಆತ್ಮೀಯ ಪರಿಜನರೆಲ್ಲ ಅರಿತಿದ್ದುದರಿಂದ ಆತನ ಆದರ ಸತ್ಕಾರಕ್ಕೆ ಕಡಿಮೆಯಾಗುತ್ತಿರಲಿಲ್ಲ ವಿಜಯೆಯು ಮತ್ತೇನೂ ಹೇಳದೆ ಮಾಳಿಗೆಯ ಮೇಲಿನ ತನ್ನ ಕೋಣೆಗೆ ನಡೆದಳು. ಸುಮಾರು ಹತ್ತಿಪ್ಪತ್ತು ನಿಮಿಷಗಳ ನಂತರ ಕೆಳಗೆ ಬಂದು ನೋಡಲು ಮೇಜಿನ ಮೇಲೆ ಬಾಗಿ ವಿಲಾಸನು ಕಾಗದ ಪತ್ರಗಳನ್ನು ನೋಡುತ್ತಲಿದ್ದ. ಆಕೆ ಬಂದ ಸಪ್ಪಳವಾಗಲು ತಲೆಯೆತ್ತಿ ನಮಸ್ಕಾರದ

ಶಾಸ್ತ್ರಮಾಡಿ ತೀರ ಗಂಭೀರನಾಗಿ ಕುಳಿತ. ಆತ ನುಡಿದ— "ನಾನು ಸಿಟ್ಟಾದುದರಿಂದಲೇ ಇಷ್ಟೊಂದು ದಿನ ಬರಲಿಲ್ಲವೆಂದು ನಿನ್ನ ತಿಳುವಳಿಕೆಯಾಗಿರಬಹುದು. ಹಾಗೇನೂ ಆಗಿಲ್ಲ. ಒಂದುವೇಳೆ ನನಗೆ ಸಿಟ್ಟು ಬಂದಿದ್ದರೂ ಅದು ಅನುಚಿತವಾಗುತ್ತಿರಲಿಲ್ಲ. ಅದನ್ನು ನಿನಗೆ ಖಾತ್ರಿ ಮಾಡಿಕೊಡಲು ಬಂದಿರುವೆ.

ವಿಲಾಸ ಇನ್ನೂ ತನಕ ವಿಜಯೆಗೆ ತಾವು ಎಂದೇ ಸಂಬೋಧಿಸುತ್ತಿದ್ದ. ಆದರೆ ಇಂದು ಒಮ್ಮೆಲೆ ಏಕವಚನದಿಂದ ಸಂಬೋಧಿಸಿದನಾದರೂ ಆಕೆಗೆ ಆನಂದವನ್ನೆನಿಸಲಿಲ್ಲವೆಂದು ಆಕೆಯ ಚರ್ಯೆಯಿಂದ ಯಾರಾದರೂ ಹೇಳುವಂತಿತ್ತು. ಆದರೆ ಆಕೆ ಮರುಮಾತನಾಡದೆ ಸಾವಕಾಶವಾಗಿ ಒಳಗೆ ಬಂದು ಒಂದು ಖುರ್ಚಿಯನ್ನೆಳೆದು ಕುಳಿತುಕೊಂಡಳು. ವಿಲಾಸನು ಆಕೆಯೆಡೆಗೆ ನೋಡದೆ ನುಡಿದ, "ನಾನು ಎಲ್ಲ ವ್ಯವಸ್ಥೆ ಮಾಡಿಕೊಂಡು ಕಲಕತ್ತೆಯಿಂದ ಇದೇ ಈಗ ಬಂದಿರುವೆ. ತಂದೆಗೆ ಸಹ ಇನ್ನೂ ಭೆಟ್ಟಿಯಾಗಿಲ್ಲ. ನೀನು ಚಕ್ಕಂದದಿಂದ ಇರಬಲ್ಲಿ. ಆದರೆ ನಾನೆಂತು ಇರಬಲ್ಲೆ? ನನ್ನ ಹೊಣೆಗಾರಿಕೆಯನ್ನು ನಾನು ಅರಿತಿರುವ— ಮಹತ್ ಕಾರ್ಯವೊಂದನ್ನು ಕೈಕೊಂಡು ಹೇಗೆ ತಣ್ಣಗೆ ಕುಳಿತಿರಲಿ? ಬ್ರಾಹ್ಮ ಮಂದಿರದ ಪ್ರತಿಷ್ಠೆಯು ಇದೇ ಬರುವ ರಜೆಯಲ್ಲಿ ನೆರವೇರುವದು. ಎಲ್ಲವನ್ನೂ ನಿಶ್ಚಯಿಸಿಕೊಂಡೇ ಬಂದಿರುವೆ. ಹೆಚ್ಚೇನು? ಆಮಂತ್ರಣ ಕೊಡುವುದನ್ನು ಸಹ ಬಾಕಿ ಇಟ್ಟಿಲ್ಲ. ನಿನ್ನೆ ಬೆಳಗಿನಿಂದ ತಿರುಗಲಿಕ್ಕೆ ಹತ್ತಿದವ; ಇನ್ನೂ ಮುಗಿದಿಲ್ಲ. ಆದರೂ ಒಂದು ರೀತಿಯಿಂದ ನಿಶ್ಚಿಂತೆಯಾಯಿತು. ಬರುವವರ ಹೆಸರೆಲ್ಲ ಈ ಕಾಗದದಲ್ಲಿವೆ, ಒಮ್ಮೆ ನೋಡಿಕೋ?" ಎಂದು ಸಂತೋಷದಿಂದ ಆ ಕಾಗದವನ್ನು ಆಕೆಯೆಡೆಗೆ ಸರಿಸುತ್ತ ಕುರ್ಚಿಯ ಮೇಲೆ ಆರಾಮಾಗಿ ಮಲಗಿಕೊಂಡ.

ಆದರೂ ವಿಜಯೆ ಮಾತನಾಡಲಿಲ್ಲ. ಆಮಂತ್ರಿತರ ಹೆಸರನ್ನು ನೋಡಲು ಸಹ ಕುತೂಹಲ ತೋರಿಸಲಿಲ್ಲ. ಹ್ಯಾಗೆ ಕುಳಿತಿದ್ದಳೋ ಹಾಗೇ ಇದ್ದಳು. ತುಸುಹೊತ್ತಿನ ನಂತರ ವಿಲಾಸನೇ "ಏನಾಯಿತು? ಏಕೆ ಮೌನವಾಗಿರುವೆ?" ಎಂದನು.

"ಆಮಂತ್ರಿತರಿಗೆಲ್ಲ ಏನು ಹೇಳಬೇಕಾಯಿತೆಂದು ಯೋಚಿಸುತ್ತಲಿದ್ದೆ."

"ಅಂದರೆ?"

"ಮಂದಿರ ಪ್ರತಿಷ್ಠೆಯ ಸಲುವಾಗಿ ನಾನಿನ್ನೂ ನಿರ್ಧರಿಸಿಲ್ಲ.''

ವಿಲಾಸ ನೆಟ್ಟಗೆ ಕುಳಿತು ಕೆಲಹೊತ್ತು ತೀವ್ರವಾಗಿ ಆಕೆಯನ್ನೇ ದಿಟ್ಟಿಸಿದ. "ನೀನು ಏನೆಂದು ತಿಳಿದಿರುವೆ? ಈ ರಜೆಯಲ್ಲಾಗದಿದ್ದರೆ, ಬಹಳ ದಿನ ಹೋದೀತು. ಕರೆದಾಗ ಬರಲಿಕ್ಕೆ ಆಮಂತ್ರಿತರೆಲ್ಲ ನಿನ್ನ ರೈತರಲ್ಲ. ಅಂತೂ ಇನ್ನೂ ತನಕ ನಿರ್ಧರಿಸದಿದ್ದುದಕ್ಕೆ ಕಾರಣವನ್ನಾದರೂ ಹೇಳು ನೋಡುವಾ?''

ಸಿಟ್ಟಿನಿಂದ ಕಣ್ಣುಗಳೆರಡೂ ಕೆಂಪಗಾದವು. ವಿಜಯೆ ಮೋರೆ ಕೆಳ ಹಾಕಿ ಸುಮ್ಮನೆ ಕುಳಿತಿದ್ದಳು. "ಇಲ್ಲಿ ಅವೆಲ್ಲ ಆಡಂಬರ ಮಾಡುವುದು ಅವಶ್ಯವಿಲ್ಲವೆಂದು ನನಗನಿಸಿದೆ'' ಎಂದಳು.

"ಆಡಂಬರ? ಅದಕ್ಕಾಗಿ ನೀನೇನು ಕಾಳಜಿ ಮಾಡುವುದು ಬೇಡ. ಎಲ್ಲ ನಾನು ನೋಡಿಕೊಳ್ಳುವೆ.''

"ಇಲ್ಲಿ ಬ್ರಾಹ್ಮ ಮಂದಿರವನ್ನು ಸ್ಥಾಪಿಸುವುದರಿಂದ ಲಾಭವೇನೂ ಇಲ್ಲ. ಅದು ಅವಶ್ಯವಿಲ್ಲ."

ವಿಲಾಸ ಚಕಿತನಾದ. ಮಾತೇ ಹೊರಡಲಿಲ್ಲ. "ನೀನು ನಿಜವಾದ ಬ್ರಾಹ್ಮಮಹಿಳೆಯಾಗಿದ್ದರೆ ಹೀಗೆ ನುಡಿಯುತ್ತಿರಲಿಲ್ಲ" ಎಂದು ತಡೆದು ನುಡಿದ.

ಈ ಮಾತು ವಿಜಯೆಯಿಂದ ಸಹಿಸಲಾಗಲಿಲ್ಲ. ಆದರೂ ಬಿಗಿ ಹಿಡಿದು "ನಿಮ್ಮ ಮನಸ್ಸು ತುಸು ಶಾಂತವಾದಾಗ ವಿಚಾರಮಾಡೋಣ. ಈಗ ಬೇಡ'' ಎಂದವಳೇ ಅಲ್ಲಿಂದ ಏಳತೊಡಗಿದಳು. ಆದರೆ ಅಷ್ಟರಲ್ಲಿ ನೌಕರನು ಚಹಾ ತೆಗೆದುಕೊಂಡು ಬಂದುದರಿಂದ ಸುಮ್ಮನೆ ಕೂಡ್ರಬೇಕಾಯಿತು. ಆದರೆ ವಿಲಾಸ ಅತ್ತ ಕಣ್ಣೆತ್ತಿಯೂ ನೋಡಲಿಲ್ಲ. ಆತ ಬ್ರಾಹ್ಮ ಸಮಾಜಕ್ಕೆ ಸೇರಿದವನಾಗಿದ್ದರೂ ಶಿಷ್ಟತೆಯ ಅರಿವಿರಲಿಲ್ಲ. ನೌಕರನ ಮುಂದೆಯೇ ಆತನು ''ನಿಮ್ಮ ಸಂಬಂಧವನ್ನು ಈಗಿಂದೀಗಲೇ ದೂರಮಾಡ ಬಲ್ಲೆ .ಬಲ್ಲಿಯಾ?'' ಎಂದನು.

ವಿಜಯೆ ಸುಮ್ಮನೆ ಚಹಾ ತಯಾರಿಸುತ್ತಿದ್ದಳು. ಆಕೆ ಉತ್ತರಿಸಲಿಲ್ಲ. ನೌಕರನು ಹೋದ ಮೇಲೆ ಸಾವಕಾಶವಾಗಿ ''ನಾನು ಕಾಕಾಜಿಯವರೊಡನೆ

ಚರ್ಚಿಸುವೆ. ನಿಮಗದರ ಗೊಡವೆ ಬೇಡ''ಎಂದು ಹೇಳಿ ಚಹಾದಕಪ್ಪನ್ನು ಆತನೆಡೆಗೆ ಮುಂದೆ ಮಾಡಿದಳು.

ವಿಲಾಸನು ಅದನ್ನು ಮುಟ್ಟಲಿಲ್ಲ. ಆತ ಮೊದಲಿನಂತೆಯೇ ಉಸುರಿದ ''ನಿಮ್ಮ ಸಂಬಂಧವನ್ನು ಬಿಟ್ಟುಬಿಟ್ಟರೆ ಏನಾದೀತೆಂಬುದನ್ನು ಬಲ್ಲಿಯಾ?"

''ಇಲ್ಲ. ನಿಮ್ಮ ಜವಾಬ್ದಾರಿಯಿಂದ ನಮ್ಮ ಮಾನಹೋಗಬೇಕಾಗಿ ಬಂದ ಈ ಸಂದರ್ಭದಲ್ಲಿ ಸರಿಪಡಿಸುವ ಭಾರ ನಿಮ್ಮದು.''

''ನಾನು ಕರ್ತವ್ಯ ದಕ್ಷ. ಕರ್ತವ್ಯವನ್ನು ಪ್ರೀತಿಸುವೆನೇ ಹೊರತು ಆಟವನ್ನಲ್ಲ. ಇದನ್ನು ಗಂಟುಹೊಡೆದುಕೋ."

''ಒಳ್ಳೇದು. ಅದನ್ನೆಂದೂ ಮರೆಯುವದಿಲ್ಲ.''

ಈ ವ್ಯಂಗದಿಂದ ವಿಲಾಸ ಹುಚ್ಚನಂತಾದ. ''ಒಳ್ಳೇದು ಮರೆಯುದಂತೆಯೇ ಮಾಡುತ್ತೇನೆ" ಎಂದು ಕೂಗಿಕೊಂಡ.

ವಿಜಯೆ ಉತ್ತರಕೊಡಲಿಲ್ಲ. ತಲೆಬಾಗಿಸಿ ಚಹಾ ಪಾತ್ರೆಯಲ್ಲಿ ಚಮಚೆಹಾಕಿ ಕರಡಹತ್ತಿದಳು. ಆಕೆ ಸುಮ್ಮನಾದುದನ್ನು ಕಂಡು ವಿಲಾಸನು ತುಸು ಹೊತ್ತಿನ ನಂತರ ಸಾವರಿಸಿ ನುಡಿದ. ''ಹಾಗಾದರೆ ಅಷ್ಟು ದೊಡ್ಡ ಮನೆ ಇನ್ನಾವ ಕೆಲಸಕ್ಕೆ ಬಂದೀತು ಹೇಳು. ಹಾಗೆಯೇ ಖಾಲೀ ಕೆಡಹುವದಂತೂ ಶಕ್ಯವಿಲ್ಲ.''

''ಆದರೆ ಆ ಮನೆಯಿಂದ ಜಗದೀಶನ ಮಗನನ್ನು ಬಿಡಿಸಬೇಕೋ ಹೇಗೆಂಬುದೇ ಇನ್ನೂ ನಿಶ್ಚಿತವಾಗಿಲ್ಲ.''

ವಿಲಾಸ ಈ ಉತ್ತರವನ್ನು ಕೇಳಿ ಕಿಡಿಕಿಡಿಯಾದ. ನೆಲವನ್ನು ಒದೆದು ಆತಗರ್ಜಿಸಿದ ''ಒಮ್ಮೆಯಲ್ಲ ನೂರು ಸಲನಿಶ್ಚಿತವಾಗಿದೆ.ನಾನು ಸಮಾಜದ ಪ್ರತಿಷ್ಠಿತ ಗೃಹಸ್ಥರನ್ನು ಕರೆಸಿ ಅವರ ಅಪಮಾನವನ್ನೆಂದಿಗೂ ಮಾಡಿಸಲಾರೆ. ಆ ಮನೆಯಂತೂ ನಮಗೆ ಬೇಕೇ ಬೇಕು. ಅದನ್ನು ವಶಪಡಿಸಿಕೊಂಡೇ ತೀರುವೆ." ಎಂದವನೇ ಉತ್ತರಕ್ಕಾಗಿ ಸಹ ಕಾಯದೆ ತೀವ್ರತೆಯಿಂದ ಆತ ಹೊರಬಿದ್ದು ನಡೆದ.

೬

ವಿಜಯೆಗೆ ಆ ದಿನದಿಂದ ಆ ಅಪರಿಚಿತ ವ್ಯಕ್ತಿಯು ತನ್ನ ಮಿತ್ರನನ್ನು ಒಮ್ಮೆಯಾದರೂ ರಾಸಬಿಹಾರಿಯ ಬಳಿಗೆ ಕರೆದುಕೊಂಡು ಬರಬಹುದೆಂದು

ಅನಿಸುತ್ತಿತ್ತು. ತಾವಾಡಿದ ಮಾತುಗಳಿಂದ ಆತನು ಬರದಿರುವುದಕ್ಕೆ ಸಬಲ ವಾದ ಕಾರಣಗಳಾವವೂ ಕಂಡುಬಂದಿರಲಿಲ್ಲ. ಆಕೆ ಯೋಚಿಸುತ್ತ ಹೋದಂ ತೆಲ್ಲ ತಾನು ಅನುಕೂಲವಾಗಿಯೇ ಮಾತಾಡಿರುವೆನೆಂದು ನಿಶ್ಚಯಿಸಿಕೊಂ ಡಳು. ಮುಳುಗುವವನು ತೇಲುವ ಬೆಂಡಿನ ಸಹಾಯವನ್ನು ಸಹ ಅಪೇಕ್ಷಿಸು ತ್ತಾನೆ. ಅಂದ ಬಳಿಕ ತನ್ನ ಮನೆಮಾರನ್ನೆಲ್ಲ ಕಳೆದುಕೊಳ್ಳುವ ನರೇಂದ್ರನು ಒಮ್ಮೆಯಾದರೂ ಯತ್ನಿಸಬಾರದೇಕೆ? ನಿರಾಶೆಯಾಗುವಂತಹ ಕಡೆಗಳಲ್ಲಿ ಸಹ ಹಿತಚಿಂತಕರಾದವರು ಇನ್ನೊಮ್ಮೆ ಯತ್ನಿಸಲು ಸಲಹೆ ಕೊಡುತ್ತಾರೆ. ಅಂದ ಬಳಿಕ ಈ ಗೆಳೆಯನು ತುಸುವಾದರೂ ಯತ್ನಿಸಲಾರನೆ? ಆ ವ್ಯಕ್ತಿ ಜಗತ್ತಿನ ನೀತಿಗೆ ತೀರ ಹೊರತಾಗಿರಲಾರ.

ನದಿಯ ದಂಡೆಗುಂಟ ಹಾಯ್ದ ಹಾದಿಯಲ್ಲಿ ಪುನಃ ಅವನ ಬೆಟ್ಟಿ ಯಾಗಲಿಲ್ಲ. ಆದರೂ ದಿನಾಲು ಆಕೆ ಅವನದೇ ಪ್ರತೀಕ್ಷೆ ಮಾಡುತ್ತಿದ್ದಳು. ದಿನಗಳುರುಳಿತು. ಆದರೆ ಆ ವ್ಯಕ್ತಿಯೂ ಇಲ್ಲ;ಆತನ ಉಧ್ಭುತ ಡಾಕ್ಟರನೂ ಇಲ್ಲ.

ರಾಸಬಿಹಾರಿಯು ಮಗನೊಡನೆ ತನ್ನ ಭೆಟ್ಟಿಯೇ ಆಗಿಲ್ಲವೆಂಬಂತೆ ಮಾತನಾಡಿದ. ಆದರೂ ಮಾತಿನ ಒಲವು ಸಮಾಜ ಪ್ರತಿಷ್ಠೆಯ ಕಡೆಗೇ ಇತ್ತು. ವಿಜಯೆಗೆ ಸಂಕೋಚವೆನಿಸಿದ್ದರಿಂದ ಆಕೆ ಈ ಬಗ್ಗೆ ಮಾತನ್ನೆತ್ತ ಲಿಲ್ಲ. ಮಾರ್ಗಶೀರ್ಷ ಕಳೆದು ಪೌಷ್ಯ ಪ್ರತಿಪದೆಯ ದಿನವೇ ತಂದೆ ಮಕ್ಕಳಿ ಬ್ಬರೂ ಕಾಣಿಸಿಕೊಂಡರು. ರಾಸಬಿಹಾರಿಯೆಂದ. "ಮಗೂ ಇನ್ನಂತೂ ದಿನ ಹೆಚ್ಚಿಗೆ ಉಳಿಯಲಿಲ್ಲ. ಅಷ್ಟರಲ್ಲಿಯೇ ಎಲ್ಲ ತಯಾರಿ ನಡೆಯಬೇಕು"

ವಿಜಯೆ ನಿಜವಾಗಿಯೂ ಚಕಿತಳಾದಳು. "ಆತ ತಾನಾಗಿಯೆ ಮನೆ ಬಿಟ್ಟ ಹೊರತು, ಏನು ಮಾಡುವುದೂ ಶಕ್ಯವಿಲ್ಲ"

ವಿಲಾಸ ಒಣನಗೆ ನಕ್ಕ. ರಾಸಬಿಹಾರಿಯು "ಮಗೂ, ನೀನು ಯಾರ ವಿಷಯವಾಗಿ ಮಾತನಾಡುತ್ತಿರುವಿ? ಜಗದೀಶನ ಮಗನ ಬಗ್ಗೆ ಅಲ್ಲವೆ? ಆತ ನಿನ್ನೆಯೇ ಮನೆ ಬಿಟ್ಟು ಬಿಟ್ಟಿದ್ದಾನೆ"

ವಿಜಯೆಗೆ ಇದರಿಂದ ತುಂಬಾ ದುಃಖವಾಯಿತು. ವಿಲಾಸನಿಗೆ ಕಾಣದಹಾಗೆ ಮೋರೆ ತಿರುವಿಕೊಂಡಳು. ತುಸು ಹಗುರಾದಮೇಲೆ ಆಕೆ "ಆತನ ವಸ್ತುಗಳೆಲ್ಲ ಏನಾದವು? ಎಲ್ಲವನ್ನೂ ತೆಗೆದುಕೊಂಡು ಹೋದನೆ?" ಎಂದು ರಾಸಬಿಹಾರಿಗೆ ಕೇಳಿದಳು.

ವಿಲಾಸ ವ್ಯಂಗವಾಗಿ ನುಡಿದ " ಎಂತಹ ಮೂರು ಕಾಸಿನ ಸಾಮಾನು ಅವು ಹರಕುಚಾಪೆಯೇನು? ಅದರ ಮೇಲೆಯೇ ಮಲಗುತ್ತಿದ್ದನೋ ಏನೊ? ಅದನ್ನೆಲ್ಲ ಹೊರಗೆ ಮರದ ಕೆಳಗೆ ಎಳೆದು ತಂದು ಹಾಕಿದ್ದೇನೆ. ಬೇಕಾದರೆ ತೆಗೆದುಕೊಂಡು ಹೋಗುತ್ತಾನೆ. ಇಲ್ಲವಾದರೆ ಬಿಡುತ್ತಾನೆ. ನಮಗೇನು?''

ವಿಜಯೆ ಸುಮ್ಮನಿದ್ದಳು. ಆದರೂ ಆಕೆಗೆ ವೇದನೆಯಾಗಿದೆಯೆಂದು ಮೋರೆ ಹೇಳುವಂತಿತ್ತು. ಇದನ್ನು ಕಂಡು ರಾಸಬಿಹಾರಿಯು ವಿಲಾಸನಿಗೆ ತಿರಸ್ಕಾರದ ಸ್ವರದಿಂದ 'ವಿಲಾಸ, ಹೀಗೆ ಮಾಡಿದುದು ತಪ್ಪಾಯಿತು. ಎಂತಹ ಕೆಟ್ಟವನೇ ಇರಲಿ, ಆತನ ದುಃಖದಲ್ಲಿ ಸಹಾನುಭೂತಿಯನ್ನು ತೋರುವುದು ಮನುಷ್ಯನಾದವನ ಕರ್ತವ್ಯ. ನಿನಗೆ ಮನಸ್ಸಿನಲ್ಲಿ ವೇದನೆ ಯಾಗಿಲ್ಲವೆಂದು ನಾನೆಣಿಸುವದಿಲ್ಲ. ಆದರೆ ಅದನ್ನು ಬಹಿರಂಗವಾಗಿಯೂ ವ್ಯಕ್ತಪಡಿಸುವುದು ನಿನ್ನ ಕರ್ತವ್ಯವೇ ಆಗಿದೆ. ಜಗದೀಶನ ಮಗನೊಡನೆ ಎಂದಾದರೂ ಭೆಟ್ಟಿಯಾಗಿದ್ದೆಯಾ? ನನಗೆ ಭೆಟ್ಟಿಯಾಗಲು ಹೇಳಿದ್ದಿಯಾ?

ತಂದೆಯ ಮಾತಿನ ಒಲವನ್ನು ಗಮನಿಸದೆ ಆತ ನಡುವೆಯೇ ಬಾಯಿ ಹಾಕಿ. ಅಪ್ಪಾ, ಅವನಿಗೆ ಭೆಟ್ಟಿಯಾಗಿ ಆಮಂತ್ರಣ ಕೊಡುವುದರ ಹೊರತು ನನಗೆ ಬೇರೆ ಕೆಲಸವಿಲ್ಲವೆಂದು ತಿಳಿದೆಯಾ? ನೀನು ಹೇಳುವು ದಕ್ಕಂತೂ ಲೆಕ್ಕವೇ ಇಲ್ಲ. ಇಷ್ಟೇ ಅಲ್ಲ ನಾನು ಭೆಟ್ಟಿಯಾಗುವುದಕ್ಕಿಂತ ಮುಂಚಿತವಾಗಿಯೇ ತನ್ನ ಸಾಮಾನು ಸಟ್ಟೆ ತೆಗೆದುಕೊಂಡು ಹೋಗಿ ಬಿಟ್ಟಿದ್ದಾನೆ. ದೊಡ್ಡ ವಿಲಾಯತಿ ಡಾಕ್ಟರ. ನಿರುಪಯೋಗಿ!''— ಇನ್ನೂ ಏನೇನೋ ಬಡಬಡಿಸತಕ್ಕವನಿದ್ದ. ಆದರೆ ರಾಸಬಿಹಾರಿಯು ವಿಜಯೆಯ ಮನೋಭಾವವನ್ನರಿತು ಸಿಟ್ಟಿನಿಂದ ನುಡಿದ ''ವಿಲಾಸ, ನಿನ್ನ ನಾಲಗೆ ಉದ್ದ ವಾಯಿತು, ಅಕ್ಷಮ್ಯವಾದ ನುಡಿಗಳನ್ನು ನುಡಿಯುತ್ತಲಿರುವೆ. ನಿನ್ನ ಕೃತಿ ನಾಚಿಕೆ ತರುವಂತಹದಾಗಿದೆ. ಇದಕ್ಕಾಗಿ ನೀನು ಪಶ್ಚಾತ್ತಾಪಪಡಬೇಕು.''

ವಿಲಾಸ ತುಸುಮಾತ್ರವೂ ಲಜ್ಜಿತನಾಗಲಿಲ್ಲ. ವಿಚಲಿತನಾಗಲಿಲ್ಲ. "ಯಾತಕ್ಕಾಗಿ ಅಪ್ಪಾ! ದುಃಖಿತರಿಗೆ ನೆರವಾಗಬೇಕೆಂಬ ಉಪದೇಶ ನಾನೂ ಸಾಕಷ್ಟು ಕಲಿತಿರುವೆ. ಆದರೆ ಇಂತಹ ಗರ್ವಿಷ್ಠರಿಗಲ್ಲ— ನಮ್ಮ ಮನೆಬಾಗಿ ಲಿಗೆ ಬಂದು ನಮ್ಮನ್ನೇ ಹೀಯಾಳಿಸುವ ಹರಾಮಖೋರರಿಗಲ್ಲ.

ಆತನ ಉತ್ತರವನ್ನು ಕೇಳಿ ಇಬ್ಬರೂ ವಿಸ್ಮಿತರಾದರು. "ನೀನು ಯಾರಬಗ್ಗೆ ಆಡುತ್ತಿರುವಿ? ಮನೆಗೆ ಬಂದು ಅಪಮಾನ ಮಾಡಿಹೋದವರಾರು?" ಎಂದು ರಾಸಬಿಹಾರಿ ಕೇಳಿದನು.

ವಿಲಾಸನು ಗಾಂಭೀರ್ಯವನ್ನು ನಟಿಸಿ "ಜಗದೀಶನ ಕುಲಪುತ್ರ ನರೇಂದ್ರನ ಮಾತನ್ನೇ ಆಡುತ್ತಲಿರುವೆ. ಆತ ಒಮ್ಮೆ ಇದೇ ಕೋಣೆಯಲ್ಲಿ ಕೂತು ನನ್ನ ಅಪಮಾನಮಾಡಿ ಹೋಗಿದ್ದ. ಆಗ ಆತನ ಗುರುತಿರಲಿಲ್ಲ. ವಿಜಯೆಯ ಅಪಮಾನ ಮಾಡುವದಕ್ಕೂ ಆತ ಹಿಂದೆಮುಂದೆ ನೋಡಿರಲಿಲ್ಲ. ಅವರಿಗೆ ಇದು ಗೊತ್ತಿರಬಹುದು" ಎಂದ.

ವಿಜಯೆ ಚಕಿತಳಾಗಿ ನೋಡುತ್ತಿರುವುದನ್ನು ಕಂಡು ವಿಲಾಸನೇ ಮುಂದುವರಿಸಿದ.

"ಪೂರ್ಣಬಾಬುವಿನ ಸಂಬಂಧಿಕನಾಗಿ ನಿಮ್ಮೊಡನೆ ಮಾತಾಡಲು ಬಂದವನು ಯಾರೆಂದು ತಿಳಿದಿದ್ದೀರಿ? ಅವನೇ ನರೇಂದ್ರ. ಗಂಡುಸಾಗಿದ್ದರೆ ಆಗಲೇ ತನ್ನ ಪರಿಚಯ ಹೇಳಬೇಕಿತ್ತು! ಹೇಡಿ!"

ವಿಜಯೆಯ ಮೋರೆಯೆಲ್ಲ ವೇದನೆಯಿಂದ ಕ್ಷಣಮಾತ್ರದಲ್ಲಿ ಬಾಡಿ ಹೋದುದನ್ನು ಅವರಿಬ್ಬರೂ ವಿಸ್ಮಿತರಾಗಿ ನೋಡಿದರು.

## ೧೦

ಮಂದಿರದ ಸ್ಥಾಪನೆಗೆ ಕೆಲವೇ ದಿನ ಉಳಿದಿದೆ. ಜಗದೀಶನ ಮನೆಯಲ್ಲಿಯ ದೊಡ್ಡ ಕೋಣೆಯನ್ನು ಮಂದಿರಕ್ಕಾಗಿಯೂ, ಉಳಿದ ಕೋಣೆಗಳನ್ನೆಲ್ಲ ಅತಿಥಿಗಳಿಗೆ ಇಳಕೊಳ್ಳುವುದಕ್ಕಾಗಿಯೂ ಸಜ್ಜುಗೊಳಿಸುತ್ತಿದ್ದಾರೆ. ವಿಲಾಸನೇ ಇವೆಲ್ಲವುಗಳ ಮೇಲ್ವಿಚಾರಕ. ಇತರ ಜನರಿಗೂ ಬಹಳಷ್ಟು ಆಮಂತ್ರಣ ಹೋಗಿದೆ. ವಿಲಾಸನ ಮಿತ್ರರೆಲ್ಲ ಅವನಲ್ಲಿಯೂ, ಇತರರೆಲ್ಲ ವಿಜಯೆಯಮನೆಯಲ್ಲಿಯೂ ನಿಲ್ಲುವದೆಂದು ನಿಶ್ಚಯವಾಗಿದೆ. ಹೆಂಗಸರು ಬಂದರೂಅಲ್ಲಿಯೇ. ಈ ರೀತಿಯಾಗಿ ಎಲ್ಲ ವ್ಯವಸ್ಥೆ ಇಡಲಾಗಿದೆ.

ಅಂದು ವಿಜಯೆ ಸ್ನಾನಮಾಡಿ ಕೆಳಗಿನ ಕೋಣೆಯಲ್ಲಿ ಕಾಲಿಡುತ್ತಲೇ ಪರೇಶನು ಒಂದುಕೈಯಿಂದ ಹುರಿದ ನೆಲಗಡಲೆಯನ್ನು ಸೆರಗಿನಿಂದ ತೆಗೆದು ತಿನ್ನುವುದನ್ನೂ, ಇನ್ನೊಂದು ಕೈಯಿಂದ ಆಕಳ ಕರುವಿನ ಬೆನ್ನು ಸವರುತ್ತ ಅನಿರ್ವಚನೀಯ ಆನಂದವನ್ನು ಸವಿಯುತ್ತಿರುವುದನ್ನೂ ಕಂಡಳು. ಕರುವು

ಸಹ ಕಣ್ಣುಮುಚ್ಚಿ ಕುತ್ತಿಗೆಯನ್ನೆತ್ತಿ ಹುಡುಗನ ಸೇವೆಯನ್ನು ಸ್ವೀಕರಿಸುತ್ತಿದೆ.

ಇದನ್ನು ಕಂಡು ಆಕೆಯ ಕಣ್ಣುಗಳೆರಡೂ ಹನಿಗೂಡಿದವು. ಹೀಗಾಗಲು ಯಾವ ಕಾರಣವೋ ಅರಿಯೆ. ಆಕೆ ಹೇಳಿದಂತೆ ಕೇಳುವ ಹುಡುಗನೆಂದರೆ ಇವನೊಬ್ಬನೇ. ಆಕೆ ತನ್ನ ಕಣ್ಣೊರಸಿಕೊಂಡು ಅವನನ್ನು ಹತ್ತಿರಕ್ಕೆ ಕರೆದು ವಾತ್ಸಲ್ಯದಿಂದ "ಮಗೂ, ನಿನ್ನಮ್ಮ ಕೊಟ್ಟದ್ದು ಇದೇ ವಸ್ತ್ರವೇನೋ? ಥೂ— ಒಂದು ಚಲೋ ಅಂಚೂ ಇರಬಾರದೇ?" ಎಂದಳು.

ಆತ ಓರೆಗಣ್ಣಿನಿಂದ ತನ್ನ ಧೋತರದ ಅಂಚನ್ನೂ, ವಿಜಯೆಯ ಸೀರೆಯ ಅಂಚನ್ನೂ ತೂಗಿ ನೋಡಿದ. ಆತನಿಗೆ ಸಂತಾಪವಾಯಿತು. ಆತನ ಮನದ ಒಲವನ್ನು ತಿಳಿದು ವಿಜಯೆಯು ತನ್ನ ಅಂಚನ್ನು ತೋರಿಸಿ ಮಗೂ, ನಿನಗಿಂತಹದೇ ವಸ್ತ್ರಬೇಕಲ್ಲವೇ?" ಎಂದಳು.

ಪರೇಶನು "ನಮ್ಮಮ್ಮನಿಗಂತೂ ವಸ್ತ್ರ ಕೊಳ್ಳುವುದೇ ಗೊತ್ತಿಲ್ಲ. ನನಗೆ ನಿಮ್ಮಂತಹದೇ ಬೇಕು'' ಎಂದ.

"ನಾನು ನಿನಗೆ ಅಂತಹದನ್ನೇ ತಂದುಕೊಡುವೆ. ಆದರೆ...."

ಪಾಪ! ಆತನಿಗೆ 'ಆದರೆ' ಎಂಬುದರ ಪರಿವೆಯೆಲ್ಲಿ? ಆತನು ಕಿವಿಯವರೆಗೂ ಬಾಯಿತೆರೆದು ನಕ್ಕು "ಎಂದು ತಂದುಕೊಡುವಿರಿ?" ಎಂದನು.

"ತಂದು ಕೊಡುವೆ. ಆದರೆ ನನ್ನ ಒಂದು ಮಾತು ಕೇಳಬೇಕು."

"ಏನದು?''

ವಿಜಯೆ ತುಸು ವಿಚಾರಿತಳಾದಳು. "ಆದರೆ ನಿನ್ನಮ್ಮನಿಗೆ ಗೊತ್ತಾದರೆ ಆಕೆ ತೊಟ್ಟುಕೊಳ್ಳಲು ಕೊಡುವಂತಿಲ್ಲ.'"

ಆತನಿಗೆ ಇದಾವುದನ್ನೂ ಕೇಳುವುದು ಬೇಕಾಗಿರಲಿಲ್ಲ. ಆತ ಗೋಣಲ್ಲಾಡಿಸಿ "ಅಮ್ಮನಿಗೆ ಹೇಗೆ ಗೊತ್ತಾದೀತು? ನೀವು ಹೇಳಿದ್ದರೆ ಮಾತ್ರ....''

"ಇರಲಿ. ನೀನು ದಿಘಡಾ ಊರನ್ನು ಬಲ್ಲಿಯಾ?''

ಆತ ಕೈಯೆತ್ತಿ "ಅದೇನು ಮಹಾ! ಪಕ್ಕದ ಪಾತರಗಿತ್ತಿ ಹಿಡಿಯಲು ಎಷ್ಟೋಸಲ ಹೋಗಿರುವೆ."

"ಆ ಊರಲ್ಲಿ ಯಾರ ಮನೆ ದೊಡ್ಡದಿದೆ? ನೀನು ಬಲ್ಲಿಯಾ?"

“ಬ್ರಾಹ್ಮಣರದಲ್ಲದೆ ಇನ್ನಾರದು? ಕಳೆದ ವರ್ಷ ಹೆಂಡ ಕುಡಿದು ಮಾಳಿಗೆ ಮೇಲಿಂದ ಬಿದ್ದಿದ್ದನಲ್ಲ-ಅವನದು. ಅಲ್ಲಿಯೇ ಗೋವಿಂದನ ಮಿಠಾಯಿ ಅಂಗಡಿ ಇದೆ. ಅಮ್ಮಾ, ಗೋವಿಂದ, ಏನು ಹೇಳುತ್ತಾನೆ ಗೊತ್ತೇ? ಮೊದಲಿನ ಹಾಗೆ ಬಿಲ್ಲಿಗೆ' ಸೇರು ಮಿಠಾಯಿ ಸಿಗುವದಿಲ್ಲ. ಅರ್ಧಸೇರು ಮಾತ್ರ ಕೊಡುತ್ತೇನೆ ಎನ್ನುತ್ತಾನೆ.” ಅಮ್ಮಾ ಬೇಕಾದರೆ ಒಂದು ಬಿಲ್ಲಿ ಕೊಟ್ಟು ನೋಡು. ನಾನು ಒಂದು ಸೇರು ತಂದೇ ತರುತ್ತೇನೆ.”

“ಹಾಗಾದರೆ ಎರಡು ಬಿಲ್ಲಿಯ ಬತ್ತಾಸು ತರುತ್ತೀಯಾ?”

“ಹೂಂ. ಒಂದು ಕೈಯಲ್ಲಿ ಒಂದು ಸೇರು ತೆಗೆದುಕೊಂಡು ಅಂಗಡಿ ಯವನಿಗೆ ಇನ್ನೊಂದು-½ಸೇರು ಈ ಕೈಯಲ್ಲಿ ಕೊಡು ಎನ್ನುವೆ. ಆತ ಕೊಟ್ಟಮೇಲೆ ದುಡ್ಡು ಕೊಡುವೆ. ಅಲ್ಲವೇನೇ ಅಮ್ಮಾ?”

ವಿಜಯೆಯು ನಕ್ಕು “ಹೌದು ಹಾಗೆಯೇ. ಅಷ್ಟೇ ಅಲ್ಲ, ಆ ಅಂಗಡಿ ಯವನ ಹತ್ತರ ಆ ದೊಡ್ಡ ಮನೆಯಲ್ಲಿರುವ ನರೇಂದ್ರ ಎಲ್ಲಿ ಹೋಗಿದ್ದಾ ನೆಂದು ಕೇಳು. ಆದೀತೋ ಇಲ್ಲೋ?” ಎಂದು ಕೇಳಿದಳು.

ಪರೇಶನು ತಲೆಯಲ್ಲಾಡಿಸುತ್ತ “ಆದೀತು. ತಾ ಅಮ್ಮಾ ದುಡ್ಡು. ಓಡಿಹೋಗಿ ಈಗಲೇ ತರುವೆ” ಎಂದ.

“ಮತ್ತೆ ನಾ ಹೇಳಿದ್ದು?”

“ಅದನ್ನೂ ಕೇಳಿಕೊಂಡು ಬರುವೆ.”

“ಕೈಯಲ್ಲಿ ಬತ್ತಾಸು ಸಿಕ್ಕಮೇಲೆ ಎಲ್ಲಾದರೂ ಮರೆತೀಯೆ?”

ಪರೇಶನು ಕೈಮುಂದೆಮಾಡಿ “ದುಡ್ಡೊಂದು ಸಾರೆ ಕೊಡು. ನೋಡು ತರುತ್ತೇನೋ ಇಲ್ಲವೋ?” ಎಂದ.

“ನಿನ್ನ ಅಮ್ಮ ಕೇಳಿದರೆ ಎಲ್ಲಿ ಹೋಗಿದ್ದಿಯೆಂದು ಹೇಳುವಿ?”

ಪರೇಶನು ತುಂಬಾ ಬುದ್ಧಿವಂತನಂತೆ ನಕ್ಕು “ಅದಕ್ಕೆಲ್ಲಾ ಉತ್ತರ ಕೊಡುವದೇನು ಕಷ್ಟ. ಬತ್ತಾಸನ್ನೆಲ್ಲ ಹೀಗೆ ಅಡಗಿಸಿ, ನರೇಂದ್ರ ಬಾಬು ವಿನ ಪತ್ತೆ ಹಚ್ಚಲು ಅಮ್ಮ ಕಳಿಸಿದ್ದಳು ಎನ್ನುವೆ” ಎಂದೆನು.

ವಿಜಯೆಗೆ ನಗು ಬಂದಿತು “ನೀ ಎಂಥಹ ಹುಚ್ಚನೋ? ತಾಯಿಯ ಹತ್ತರ ಸುಳ್ಳಾಡುವಿಯಾ? ಬತ್ತಾಸು ತರಲಿಕ್ಕೆ ಹೋಗಿದ್ದೆನೆಂದು ಹೇಳು.

ಆದರೆ ಅಂಗಡಿಯ ಗೋವಿಂದನ ಹತ್ತಿರ ಕೇಳಲಿಕ್ಕೆ ಮರೆಯಬೇಡ. ಇಲ್ಲ ವಾದರೆ ನಿನಗಿಂತಹ ವಸ್ತ್ರದೊರೆಯಲಿಕ್ಕಿಲ್ಲ!"

"ಒಳ್ಳೇದು" ಎಂದವನೇ ಓಡಿದ. ವಿಜಯೆ ಅದೇ ಬದಿಗೆ ಶೂನ್ಯ ದೃಷ್ಟಿಯಿಂದ ನೋಡುತ್ತ ನಿಂತಳು. ಇಷ್ಟುದಿನ ಆತನೆಡೆಗೆ ಯಾರನ್ನಾದರೂ ಕಳಿಸಿ ಸುದ್ದಿ ತಿಳಕೊಳ್ಳುವವಳಿಗೆ ಇಂದೇಕೆ ಈ ಸಂಕೋಚ? ಇದನ್ನು ಆಳ ವಾಗಿ ಯೋಚಿಸಿದಂತೆಲ್ಲ ನಾಚಿಕೆಯಾಗಹತ್ತಿತು. ಆದರೆ ಆಕೆಯ ದುಃಖ ದಲ್ಲಿಯೇ ಈ ನಾಚಿಕೆ ಲೀನವಾಗಿ ಹೋಯಿತು.

ವಿಜಯೆಗೆ ಎಷ್ಟೋ ಪತ್ರ ಬರೆಯುವದಿತ್ತು. ಹೇಗಾದರೂ ಹೊತ್ತು ಹೋಗಲೆಂದು ಮೇಜಿನ ಬಳಿ ಕಾಗದ ಹಿಡಿದು ಕುಳಿತಳು. ಆದರೆ ಬರೆದು ದೆಲ್ಲ ಅಸ್ತವ್ಯಸ್ತವಾದುದರಿಂದ ಎಷ್ಟೋ ಹರಿದುಹಾಕಬೇಕಾಯಿತು. ಅಂತೂ ಕೊನೆಗೆ ಮುಂದೆ ಬರೆಯುವದಾಗಲಿಲ್ಲ. ಪರೇಶನೂ ಕಾಣಿಸಲಿಲ್ಲ. ಮನದ ಚಾಂಚಲ್ಯವನ್ನು ಬಿಗಿಹಿಡಿಯಲಾರದೆ ಮಾಳಿಗೆ ಹತ್ತಿ ನೋಡಿದಳು. ಕೆಲ ಹೊತ್ತಿನ ಮೇಲೆ ಆತ ನದಿಯ ದಾರಿಯಿಂದ ಅವಸರದಿಂದ ಬರುತ್ತಿರುವುದು ಕಾಣಿಸಿತು. ವಿಜಯೆಯ ಕಾಲು ನಡುಗುತ್ತಿದ್ದಿತು. ಮನಸ್ಸು ಶಂಕೆಯಿಂದ ತುಂಬಿದ್ದಿತು. ಆಕೆ ಕೆಳಗಿಳಿದು ಕೋಣೆಯಲ್ಲಿ ಬಂದೊಡನೆಯೇ ಬತ್ತಾ ಸನ್ನು ಅಡಗಿಸಿ ಕಳ್ಳ ಹೆಜ್ಜೆ ಇಡುತ್ತ ಬರುತ್ತಿರುವ ಪರೇಶನನ್ನು ಕಂಡಳು.

"ಎರಡು ಬಿಲ್ಲಿಗೆ ಮೂರು ಸೇರು ಬತ್ತಾಸು ತಂದೆ"

ವಿಜಯೆಗೆ ಅಂಜಿಕೆ. "ಅಂಗಡಿಕಾರನೇನೆಂದ?"

ಪರೇಶ ಕಟ್ಟುಸಿರು ಬಿಡುತ್ತ "ಬಿಲ್ಲಿಗೆ ಒಂದೂವರೆ ಸೇರು ಕೊಟ್ಟಿದ್ದು ಯಾರಿಗೂ ಹೇಳಬೇಡ ಎಂದಿದ್ದಾನೆ. ಅಮ್ಮಾ ಅವನು...."

ವಿಜಯೆಗೆ ತಡೆಯಲಾಗಲಿಲ್ಲ. "ಆ ನರೇಂದ್ರ ಬಾಬುವಿನ ಬಗ್ಗೆ ಏನು ಹೇಳಿದ?"

"ಅವನೂ ಎಲ್ಲಿಯೋ ಹೋಗಿರುವನಂತೆ. ಗೋವಿಂದ ಹೇಳಿದುದನ್ನು ಬಲ್ಲಿಯಾ? ಮೂರುಸೇರು—"

ವಿಜಯೆಗೆ ತಡೆಯಲಾಗಲಿಲ್ಲ. ಆಕೆಯ ಸ್ವರ ಬಿರುಸಾಯಿತು. "ಹೊಗೋ, ನನ್ನ ಎದುರಿನಿಂದ, ಮೂರು ಸೇರು ಬತ್ತಾಸುತೊಗೊಂಡು." ಎಂದವಳೇ ಕಿಡಕಿಯ ಸರಳುಗಳನ್ನು ಹಿಡಿದು ಹೊರಗೆ ನೋಡಹತ್ತಿದಳು."

ಹೀಗಾದೀತೆಂದು ಆತ ಕಲ್ಪಿಸಿರಲಿಲ್ಲ ಆತ ಓಡೋಡುತ್ತ ಹೋಗಿ ಬಂದ. ೨ ಸೇರಿನ ಬದಲು ೧ ಸೇರು ತಂದಿದ್ದಾನೆ. ಆದರೂ ಆಕೆಗೆ ಸಿಟ್ಟು ಬಂದುದನ್ನು ಕಂಡು ಆತನಿಗೆ ಅತ್ಯಂತ ವಿಷಾದವಾಯಿತು. ಆತ ಮೋರೆಯನ್ನು ಸಣ್ಣಮಾಡಿ "ಅಮ್ಮಾ ಇದಕ್ಕೂ ಹೆಚ್ಚು ಆತ ಕೊಡಲಿಲ್ಲ" ಎಂದ.

ವಿಜಯೆ ಮರುಮಾತಾಡಲಿಲ್ಲ. ಅತ್ತ ನೋಡದಿದ್ದರೂ ಆತನ ಸ್ಥಿತಿ ಆಕೆಗೆ ವೇದ್ಯವಾಯಿತು. ಕೆಲಹೊತ್ತಿನ ನಂತರ ಸಹಾನುಭೂತಿಯಿಂದ "ಹೋಗು ಮಗೂ, ಎಲ್ಲವನ್ನೂ ನೀನೇ ತಿನ್ನು" ಎಂದಳು.

ಪರೇಶ ಅಂಜಿದ, "ನಾನೇ ಎಲ್ಲವನ್ನೂ...."

ಆದರೂ ವಿಜಯೆ ಮೋರೆ ತಿರುಗಿಸಲಿಲ್ಲ. "ಹೌದು. ನನಗೆ ಬೇಡ"

ಆಕೆ ಸಿಟ್ಟಿನಿಂದ ಹೇಳುತ್ತಾಳೆಂದು ಪರೇಶನಿಗನಿಸಿತು. ಕೆಲಹೊತ್ತು ಸುಮ್ಮನುಳಿದ. ಆದರೆ ಇನಾಮಿನ ವಸ್ತ್ರದ ಜ್ಞಾಪಕವಾಗಿ "ಅಮ್ಮಾ ಭಟ್ಟಾಚಾರ್ಯನೊಡನೆ ಕೇಳಿ ಬರಲೇ?" ಎಂದು ಕೇಳಿದ.

"ಯಾವ ಭಟ್ಟಾಚಾರಿಯೋ? ಏನು ಕೇಳುವಿ?" ಎಂದು ವಿಜಯೆ ಉತ್ಸುಕತೆಯಿಂದ ಕೇಳಿದಳಾದರೂ ಆಕೆ ಅಷ್ಟಕ್ಕೇ ನಿಂತಬಿಟ್ಟಳು. ಯಾಕಂದರೆ ಎದುರಿನಲ್ಲಿಯೇ ನರೇಂದ್ರ ಬರುತ್ತಿರುವದು ಕಾಣಿಸಿತು. ಮರುಕ್ಷಣವೇ ಆತ ಆಕೆಯೆಡೆಗೆ ಬಂದು 'ನಮಸ್ಕಾರ' ಎಂದ.

"....ಎಲ್ಲಿ ಹೋಗಿದ್ದರಿ ನರೇಂದ್ರ...." ಎಂದ ಪರೇಶ.

ವಿಜಯೆಗೆ ತಿರುಗಿ ನಮಸ್ಕಾರ ಮಾಡಲಿಕ್ಕೂ ಸ್ಮೃತಿ ಉಳಿಯಲಿಲ್ಲ. ಆಕೆಯ ಮೋರೆಯೆಲ್ಲ ಲಜ್ಜೆಯಿಂದ ಆರಕ್ತವಾಯಿತು. "ಹೋಗು ಹೋಗು ಇನ್ನೇನೂ ಕೇಳಬೇಡ" ಎಂದಳು.

ಇದು ಸಹ ಸಿಟ್ಟಿನಿಂದಲೇ ನುಡಿದದ್ದೆಂದು ಪರೇಶ ಭಾವಿಸಿದ. ಆತ ದುಃಖಿತದನಿಯಿಂದ "ಭಟ್ಟಾಚಾರ್ಯರು ಅಲ್ಲಿಯೇ ಇರುತ್ತಾರೆ. ಗೋವಿಂದ ಹೇಳಿ...."

ವಿಜಯೆಯು ಒಣನಗೆ ನಕ್ಕು. "ಬನ್ನಿ, ಕುಳಿತುಕೊಳ್ಳಿ" ಎಂದು ಪರೇಶನಿಗೆ "ಮಗೂ, ಈಗ ಹೋಗು. ನಾವು ಕುಸು ಮಾತಾಡುವದಿದೆ. ಇನ್ನೊಮ್ಮೆ ಎಂದಾದರೂ ನೋಡುವಾ." ಎಂದಳು.

ಪರೇಶನು ಹೋದಬಳಿಕ ನರೇಂದ್ರನು "ನಿಮಗೆ ನರೇಂದ್ರನ ಸಮಾಚಾರ ಬೇಕಾಗಿದೆಯೇ? ಅವರೆಲ್ಲಿದ್ದಾರೆ? ಇಲ್ಲಿಯೇ ಅಲ್ಲವೇ?" ಎಂದು ಕೇಳಿದ.

ವಿಜಯೆ ಇಲ್ಲವೆನ್ನಲು ಬರುವಂತಿತ್ತು. ಆಕೆ ಸುಳ್ಳರಿಯಳು. ಹೇಗೆ ಹೇಗೋ ಲಜ್ಜೆಯನ್ನು ಅಡಗಿಸಿದಳು. ''ಹೌದು. ಅದನ್ನು ಎಂದಾದರೂ ತಿಳಿದುಕೊಳ್ಳಬಹುದು.''

''ಯಾಕೆ? ಏನು ಅವಶ್ಯಕತೆ ಇದೆಯೇ?"

ಈ ಪ್ರಶ್ನೆ ಆಕೆಗೆ ಉಪಹಾಸದಂತೆ ಭಾಸವಾಯಿತು. ''ಅವಶ್ಯವಿಲ್ಲದೆ ಯಾರ ಗೊಡವೆಗೆ ಯಾರು ಹೋಗುತ್ತಾರೆ?" ಎಂದಳು.

''ಬೇರೆಯವರ ವಿಷಯ ಏನೇ ಇರಲಿ, ನಿಮಗೂ ಅವನಿಗೂ ಈಗ ಯಾವ ಸಂಬಂಧವೂ ಉಳಿದಿಲ್ಲ. ಅಂದಬಳಿಕ ಅವನನ್ನು ಹುಡುಕುತ್ತಿರುವುದೇಕೆ? ಬಡ್ಡಿ ಬಾಕಿ ಇದೆಯೇ?

ವಿಜಯೆಯ ಮೋರೆಯಲ್ಲಿ ಚಿಂತೆಯ ಚಿನ್ಹ ಮೂಡಿತು. ಆದರೆ ಯಾವ ಉತ್ತರವನ್ನು ಕೊಡಲಿಲ್ಲ, ನರೇಂದ್ರನು ಸಹ ತನ್ನ ಮನದಲ್ಲಾದ ಉದ್ವೇಗವನ್ನು ತೋರದಿರಲು ಸಮರ್ಥನಾಗಲಿಲ್ಲ. ''ನನಗೆ ತಿಳಿದ ಮಟ್ಟಿಗೆ ಅವನಲ್ಲಿ ಸಾಲ ತೀರಿಸುವ ಶಕ್ತಿ ಇಲ್ಲ.'' ಅದಕ್ಕಾಗಿ ಅವನನ್ನು....

''ನನ್ನ ಸಾಲಕ್ಕಾಗಿಯೇ ಹುಡುಕುತ್ತಿದ್ದೇನೆಂದು ನಿಮಗೆ ಯಾರು ಹೇಳಿದರು?''

''ಇದರ ಹೊರತು ಬೇರೆ ಉದ್ದೇಶವೇನಿರಬಹುದೆಂದು ನನಗಂತೂ ಅನಿಸದು. ನಿಮಗೂ ಅವರ ಪರಿಚಯವಿಲ್ಲ. ಅವರಿಗೂ ನಿಮ್ಮ ಪರಿಚಯವಿಲ್ಲ"

''ನಾನು ಅವರನ್ನು ಬಲ್ಲೆ. ಅವರಿಗೂ ನನ್ನ ಪರಿಚಯವಿದೆ.''

ನರೇಂದ್ರ ನಕ್ಕ. ''ಆತ ನಿಮ್ಮನ್ನು ಅರಿತಿರುವನೆಂಬುದು ನಿಜ. ಆದರೆ ನೀವು ಮಾತ್ರ ಆತನಾರೆಂದು ಅರಿತಿಲ್ಲ. ನಾನೇ ನರೇಂದ್ರನೆಂದು ಭಾವಿಸಿರಿ, ಆಗ ಏನು...."

ವಿಜಯೆಯು ಗೋಣನ್ನಲ್ಲಾಡಿಸಿ '' ಇದನ್ನು ಮೊದಲೇ ನಿಮ್ಮ ಬಾಯಿಂದ ಕೇಳುವದಿತ್ತು. "

ನರೇಂದ್ರನ ಮೋರೆ ಮಲಿನವಾಯಿತು. ವಿಜಯೆಯು ಅವನನ್ನೇ ಉದ್ದೇಶಿಸಿ "ಅಡಗಿಕೊಂಡು ಬೇರೆಯವರ ಮಾತು ಕೇಳವುದು, ತನ್ನ ಹೆಸರನ್ನು ಅಡಗಿಸಿ ಬೇರೆಯವರ ಮನೋಗತವನ್ನರಿಯುವದು ನನಗಂತೂ ಸೇರದು. ನಾವು ಬ್ರಾಹ್ಮರು. ನಮ್ಮ ಧರ್ಮವೇ ಹಾಗೆ'' ಎಂದು ನುಡಿದಳು

ನರೇಂದ್ರನ್ನ ಮಲಿನವಾದ ಮೋರೆ ಕಪ್ಪಿಟ್ಟಿತು. ಆತ ತುಸು ಹೊತ್ತು ಮೌನವಾಗುಳಿದ. "ನಾನು ನಿಮ್ಮೊಡನೆ ಅನೇಕಬಾರಿ ಈ ರೀತಿ ವಿಚಾರ ಮಾಡಿದ್ದೇನೋ ನಿಜ. ಕೊನೆಗೊಮ್ಮೆ ನನ್ನ ಪರಿಚಯ ಹೇಳಬೇಕೆಂದು ಮಾಡಿದ್ದೆ. ಆದರೆ ಸಾಧ್ಯವಾಗಲಿಲ್ಲ. ಇದರಿಂದ ತಮಗೇನಾದರೂ ಹಾನಿ ಸಂಭವಿಸಿತೇ?"

"ಅದು ಮಿಂಚಿದ ಮಾತು. ಅದನ್ನು ನೆನಸುವುದರಿಂದೇನು ? ನಿಮ್ಮ ವಿಷಯವಾಗಿ ಒಂದೆರಡು ಮಾತು ಕೇಳಬೇಕೆಂದಿರುವೆ...."

"ಸಿಟ್ಟು ಬರುವುದೆಂದು ಭಾವಿಸಿದಿರಾ?.... ಇಲ್ಲ" ಎಂದವನೇ ನಿರ್ಮಲ ನಗೆಯ ತೆರೆಗಳಿಂದ ಆ ಕೋಣೆಯನ್ನೆಲ್ಲ ತುಂಬಿಬಿಟ್ಟ. ಇಷ್ಟೊಂದು ದಿನದ ಪರಿಚಯವಿದ್ದರೂ ನರೇಂದ್ರನೆಂಥವನೆಂದು ಆಕೆಗೆ ತಿಳಿದಿರಲಿಲ್ಲ. ಈ ಒಂದು ಕ್ಷಣದಲ್ಲಿಯೇ ತಿಳಿಯಿತು. ಆತ ಹೊರಗೊಂದು ಒಳಗೊಂದು ಅಲ್ಲ. ತನ್ನ ಸರ್ವಸ್ವವನ್ನು ಅಪಹರಿಸಿದವಳ ಮುಂದೆಯೂ ಅದೇ ರೀತಿಯ ಸರಲತನ. ಆತ ನೆಡೆಗೆ ನೋಡಿ ಪ್ರಶ್ನೆ ಕೇಳುವ ಸಾಹಸ ಆಕೆಗಾಗಲೊಲ್ಲದು. ಆಕೆ ದೃಷ್ಟಿ ಯನ್ನು ಕೆಳಗೆ ಹಾಕಿ "ಈಗ ತಾವೆಲ್ಲಿರುವಿರಿ ? "

"ನನ್ನ ಅಜ್ಜಿಯೊಬ್ಬಳು—ದೂರದ ಸಂಬಂಧ—ಆಕೆಯ ಮನೆಯ ಲ್ಲಿಯೇ ಇದ್ದೇನೆ."

"ತಮ್ಮ ಬಗ್ಗೆ ಹಾಕಿರುವ ಬಹಿಷ್ಕಾರವು ಆಕೆಗೆ ಗೊತ್ತಿಲ್ಲವೇ?"

"ಗೊತ್ತಿದೆ"

"ಹಾಗಾದರೆ?"

ನರೇಂದ್ರ ತುಸು ವಿಚಾರಕ್ಕೊಳಗಾದ. "ನಾನಿರುವ ಕೋಣೆ ನೇರವಾಗಿ ಮನೆಯೊಳಗೆ ಎನ್ನಲು ಬಾರದು. ನನ್ನ ಇಂದಿನ ಸ್ಥಿತಿಯನ್ನು ನೋಡಿ ಆಕೆಯ ಮಗನೂ ತೊಂದರೆ ಕೊಡುವಂತಿಲ್ಲ. ಆದರೆ ಹೀಗೆಯೇ ದಿನ ದೂಡುವುದು ನನಗೆ ಬೇಡ್ಗದು" ಎಂದು ತುಸು ತಡೆದ. "ಆದರೆ ಇವೆಲ್ಲ ನಿಮಗೇಕೆ? ತಂದೆಯ ಸಾಲ ಇನ್ನೂ ಬಾಕಿಯಲ್ಲಿದೆಯೆ?"

ಉತ್ತರಕೊಡಬೇಕೆಂದೇನೋ ಆಕೆ ಆತನೆಡೆಗೆ ತಲೆಯೆತ್ತಿ ನೋಡಿದಳು. ಆದರೆ ಬಾಯಿಂದ ಸ್ವರವೇ ಹೊರಡಲಿಲ್ಲ.

ನರೇಂದ್ರನೇ ಮುಂದುವರಿಸಿದ. "ತಂದೆಯ ಸಾಲವನ್ನು ತೀರಿಸ ಬಾರದೆಂದು ನನ್ನ ಅಭಿಪ್ರಾಯವಲ್ಲ. ಆದರೆ ಏನನ್ನಾದರೂ ಮಾರಿ ಸಾಲ

ತೀರಿಸೋಣ ಎಂದರೆ ನನ್ನದೆನ್ನುವ ವಸ್ತು ಯಾವುದೂ ಇಲ್ಲ. ಇದ್ದು ದೆಂದರೆ ಒಂದೇ ಒಂದು ಮಾಯಕ್ರೋಸ್ಕೋಪು. ಅದನ್ನು ಮಾರಿ ಬರ್ಮಾಕ್ಕೆ ಹೋಗುವ ವೆಚ್ಚ ಸಾಧಿಸಬೇಕು ಎಂದಿದ್ದೇನೆ. ಅಜ್ಜಿಯ ಸ್ಥಿತಿಯೂ ನೆಟ್ಟ ಗಿಲ್ಲ. ಹೆಚ್ಚೇನು ಆಕೆಗೆ ತಿನ್ನುಣ್ಣಲು...." ಎಂದವನೇ ತಡೆದ.

ಆಕೆಯ ಕಣ್ಣು ಹನಿಗೂಡಿತು. ಕುತ್ತಿಗೆಯನ್ನತ್ತ ಹಾಕಿದಳು.

"ನೀವು ದಯವಿಟ್ಟು ಒಪ್ಪಿದಲ್ಲಿ ನನ್ನ ತಂದೆಯ ಸಾಲವನ್ನು ನನ್ನ ಹೆಸರಿಗೆ ಬರೆದುಕೊಡಲು ಸಿದ್ಧನಿದ್ದೇನೆ. ಅದನ್ನು ತೀರಿಸಲು ನಾನು ಶಕ್ಯ ವಿದ್ದ ಯತ್ನಮಾಡುವೆ. ಅದಕ್ಕಾಗಿ ರಾಸಬಿಹಾರಿಯವರು ಮೇಲಿಂದ ಮೇಲೆ ಎಡತಾಕದಂತೆ ಸ್ವಲ್ಪ ನೋಡಿಕೊಳ್ಳಬೇಕೆಂದು ಬೇಡುವೆ."

ಪರೇಶನು ಬಂದು "ವೇಳೆ ಬಹಳವಾಯಿತು. ಊಟಕ್ಕೆ ಬಡಿಸಲೊ ಎಂದು ಕೇಳಲು ತಾಯಿ ಹೇಳಿದ್ದಾಳೆ" ಎಂದ.

ನರೇಂದ್ರನು ಎದುರಿನಲ್ಲಿದ್ದ ಗಡಿಯಾರವನ್ನು ನೋಡಿ ಗಾಬರಿಯಾಗಿ ತನ್ನಷ್ಟಕ್ಕೇ ನಾಚಿಕೆಪಟ್ಟುಕೊಂಡು ನಿಂತು "ಅಯ್ಯೋ! ಹನ್ನೆರಡಾಗಿ ಹೋಯಿತು. ನಿಮಗೆ ತುಂಬಾ ತೊಂದರೆಯಾಯಿತು" ಎಂದು ಉದ್ಗರಿಸಿದ.

ವಿಜಯೆ ಕಣ್ಣೀರನ್ನು ಹುದುಗಿಸಿಕೊಂಡಿದ್ದಳು. "ನೀವು ಬಂದ ಕಾರಣವನ್ನು ಹೇಳಲೇ ಇಲ್ಲವಲ್ಲ?"

"ಅದು ಸದ್ಯ ಇರಲಿ" ಎಂದವನೇ ಹೊರಡಲು ಸಿದ್ಧನಾದುದನ್ನು ಕಂಡು ವಿಜಯೆಯು "ನಿಮ್ಮ ಅಜ್ಜಿಯ ಮನೆ ಇಲ್ಲಿಂದ ಎಷ್ಟು ದೂರದಲ್ಲಿದೆ? ಈಗ ಅಲ್ಲಿಗೇ ಹೋಗುವಿರಾ?" ಎಂದು ಕೇಳಿದಳು.

"ಹೌದು. ಹೆಚ್ಚೇನು ದೂರವಿಲ್ಲ.—ಸುಮಾರು ಎರಡು ಹರದಾರಿ"

ವಿಜಯೆ ಸ್ತಿಮಿತಳಾದಳು. "ಈ ಬಿಸಿಲಲ್ಲಿ ಎರಡು ಹರದಾರಿ ನಡೆ ಯುವಿರಾ? ಮುಟ್ಟುವವರೆಗೆ ಮೂರಾದೀತು" "ಆಗಲಿ, ಆಗಲಿ, ನಮ ಸ್ಕಾರ"

ಎಂದು ಅಡಿಯ ಮುಂದಿಡುತ್ತಲೇ ವಿಜಯೆಯು ಬಾಗಿಲಲ್ಲಿ ಬಂದು ನಿಂತಳು. "ಈ ಹೊತ್ತು ನೀವು ಒಂದು ಮಾತನ್ನು ಕೇಳಲೇ ಬೇಕು. ಇಲ್ಲಿ ಊಟ ಮಾಡಿದ ಹೊರತು ನೀವು ಹೊರಬೀಳಲಾರಿರಿ" ನರೇಂದ್ರನು ವಿಸ್ಮಿತ ನಾದ. "ಉಂಡು ಹೋಗಬೇಕೇ? ಇಲ್ಲಿ?"

"ಅದರಿಂದೇನು? ನಿಮ್ಮ ಜಾತಿ ಹೋಗುವ ಭಯವೇ"

ಮುತ್ತೊತ್ತುವಮ್ಮ ನಕ್ಕ. "ಇಲ್ಲ. ಈಗ ನನಗೆ ಆ ಅಂಜಿಕೆ ಇಲ್ಲ. ಈ ಹೊತ್ತು ದೇವರು ನನ್ನ ಮೇಲೆ ಪ್ರಸನ್ನನಾದಂತಿದೆ. ಇಲ್ಲವಾದರೆ ಈಗ ಮನೆಗೆ ಹೋಗಿ ಕಾಣುವ ಭಾಗ್ಯ ಅಷ್ಟರಲ್ಲೇ ಇತ್ತು."

"ಹಾಗಾದರೆ ತುಸು ತಡೆಯಿರಿ. ನಾನೀಗಲೇ ಬರುವೆ" ಎಂದವಳೇ ಹೊರಗೆ ತೀವ್ರವಾಗಿ ಹೋದಳು.

೧೧

ಊಟ ಮುಗಿಯುತ್ತ ಬಂತು. ನರೇಂದ್ರ ಅದೇ ಮಾತನ್ನು ಇನ್ನೊಮ್ಮೆ ಆಡಿದ. "ನೀವು ಊಟ ಮಾಡದೆ ಇಷ್ಟು ಹೊತ್ತಿನ ತನಕ ನನ್ನ ಊಟವನ್ನೇ ನಿರೀಕ್ಷಿಸುವ ಆವಶ್ಯಕತೆ ಇರಲಿಲ್ಲ. ಯಾವ ದೇಶದಲ್ಲಿಯೂ ಈ ರೂಢಿ ಇರದು."

ವಿಜಯೆ ಮುಗುಳು ನಗೆ ನಗುತ್ತ ನುಡಿದಳು."ನಮ್ಮ ತಂದೆಯವರ ಉಪದೇಶವೇ ಹೀಗೆ. ಗಂಡುಸರ ಊಟವಾಗುವುದಕ್ಕಿಂತ ಮೊದಲು— ಇಲ್ಲವೆ ಜೊತೆಯಲ್ಲಿ ಕೂತು ಊಟ ಮಾಡುವುದು ಒಳಿತಲ್ಲವೆಂದು ಅನ್ನುತ್ತಿದ್ದರು."

"ಹೀಗೇಕೆ ಅನ್ನುವಿರಿ. ನಾನು ಉಂಡ ಎಷ್ಟೋ ಮನೆಗಳಲ್ಲಿ ಸಂಗಡವೇ ಊಟವಾಗುತ್ತಿತ್ತು."

"ವಿಲಾಯತಿಯವರ ನಡತೆಯನ್ನು ಅನುಕರಣ ಮಾಡುವವರಲ್ಲಿ ಮಾತ್ರ ಹೀಗಿರಬಹುದು. ಎಲ್ಲರಲ್ಲಿಯೂ ಅಲ್ಲ. ನೀವು ವಿಲಾಯತಿಯಲ್ಲಿಯೇ ಬಹಳ ದಿನ ವಿದ್ದುದರಿಂದ ಈ ರೀತಿ ನುಡಿಯುವಿರಿ. ನಾವು ಗಂಡಸರ ಮುಂದೆಲ್ಲ ತಿರುಗತ್ತೇವೆ, ಸಮಯ ಬಂದರೆ ಮಾತನ್ನೂ ಆಡುತ್ತೇವೆ. ಆದರೆ ಹದಿನಾರಾಣೆ ಮಡ್ಡಮ್ಮರಾಗಿರುವದಿಲ್ಲ. ಅವರಂತೆ ನಾವು ಆಚರಿಸುವುದೂ ಇಲ್ಲ."

"ಈಗ ನಡೆಯದಿದ್ದರೂ ನಡೆಯುವುದರಲ್ಲೇನು ತಪ್ಪಿದೆ? ಬೆಳಕು ಯಾವ ಕಿಡಕಿಯಿಂದ ಬಂದರೇನು?

"ಒಳ್ಳೆಯ ಸಂಗತಿ ಯಾವುದು? ಒಂದೇ ಸಲ ಊಟ ಮಾಡುವುದೇ? ಹೀಗೆ ಪರರಿಗೆ ಉಣ್ಣಿಸುವುದರಲ್ಲಿ ಸ್ತ್ರೀಯರಿಗಿರುವ ಅಧಿಕಾರವೆಷ್ಟೆಂಬುದನ್ನಾದರೂ ಬಲ್ಲಿರಾ? ನಾನು ನನ್ನ ಇತರ ಎಲ್ಲ ಅಧಿಕಾರಗಳನ್ನಾದರೂ

ಬಿಡಬಲ್ಲೆ. ಆದರೆ ಇದೊಂದು ಮಾತ್ರ ಸುತರಾಂ ಸಾಧ್ಯವಿಲ್ಲ.— ಇದೇನು? ಹಾಲನ್ನೆಲ್ಲ ಹಾಗೆಯೇ ಇಟ್ಟಿರುವಿರಿ? ಇಲ್ಲ. ಆಗದು. ತಲೆಯಲ್ಲಾಡಿಸಿದರೆ ಕೇಳುವವಳಲ್ಲ. ಇನ್ನೂ ನಿಮ್ಮ ಊಟ ಪೂರ್ಣವಾಗಿಲ್ಲ.''

"ನನ್ನ ಹೊಟ್ಟೆ ತುಂಬಿದ ವಿಷಯವನ್ನೂ ನೀವು ಹೇಳಬಲ್ಲಿರಾ? ಇದಂತೂ ಆಶ್ಚರ್ಯದ ಸಂಗತಿ." ಎಂದು ಹೇಳಿ ನರೇಂದ್ರ ಎದ್ದ. ಈ ಮಾತು ಕೇಳಿ ವಿಜಯೆಗೂ ನಗು ಬಂದಿತು.

ಮೂರನೆಯ ಪ್ರಹರದ ಸುಮಾರಿಗೆ ಹೋಗಲು ಸಿದ್ಧನಾಗಿ ನರೇಂದ್ರನು "ಈ ಹೊತ್ತು ಇದೆಲ್ಲ ಹೇಗೆ ಘಟಿಸಿತು ಎಂದು ಯೋಚಿಸುತ್ತಿರುವೆ. ನೀವು ನನಗೆ ಆ ಬಿಸಿಲಲ್ಲಿ ಹೋಗಗೊಡಲಿಲ್ಲ. ಊಟ ಮುಗಿಸಿದ ಹೊರತು ಬಿಡಲಿಲ್ಲ. ಎಲ್ಲಿಯಾದರೂ ಕಡಿಮೆ ಊಟ ಮಾಡಬಹುದೆಂದು ನನ್ನ ಊಟವಾಗುವವರೆಗೂ ಜೊತೆಯಲ್ಲಿಯೇ ಇದ್ದಿರಿ. ನಾನು ಹೀಗೆಂದುದನ್ನು ಕೇಳಿ ಉಪಹಾಸ ಮಾಡುತ್ತಿದ್ದೇನೆಂದು ಭಾವಿಸಬಾರದು'' ಎಂದು ಕೇಳಿಕೊಂಡನು.

ವಿಜಯೆಗೆ ಈ ಮಾತು ಬೆಳೆಯುವುದು ಸೇರುತ್ತಿರಲಿಲ್ಲ. "ಎಲ್ಲರ ಮನೆಯಲ್ಲಿಯೂ ಹೀಗೆಯೇ ನಡೆಯುತ್ತಿದೆ. ಅದೆಲ್ಲ ಇರಲಿ. ನೀವು ಇನ್ನೆಷ್ಟು ದಿನದೊಳಗಾಗಿ ಬರ್ಮಾಕ್ಕೆ ಹೋಗುವಿರಿ?'' ಎಂದು ಕೇಳಿದಳು.

ನರೇಂದ್ರನು ಮನಸ್ಸಿಲ್ಲದೆ ಪ್ರತ್ಯುತ್ತರಗೊಟ್ಟ, "ನಾಡದು? ಇವೆಲ್ಲವನ್ನು ನೋಡಿದರೆ ನನ್ನ ಸುಖದುಃಖಗಳಲ್ಲಿ ಸಹಾನುಭೂತಿ ತೋರುವ ವ್ಯಕ್ತಿಯೆಂದೇ ಯಾರಾದರೂ ಊಹಿಸಬಹುದು. ನನಗೆ ಯಾವ ಅಕ್ಕನೂ ಇಲ್ಲ. ತಾಯಿಯಂತೂ ಬಾಲ್ಯದಲ್ಲಿಯೇ ತೀರಿದ್ದಾಳೆ. ಅವರಿದ್ದರೆ ನನ್ನ ಬಗ್ಗೆ ಹೀಗೆಯೇ ಕಾಳಜಿ ಮಾಡುತ್ತಿದ್ದರೋ ಯಾರು ಬಲ್ಲರು. ಆದರೆ ನಿಮ್ಮ ಉಪಚಾರವನ್ನು ನೋಡಿ ನಾನು ಚಕಿತನಾಗಿರುವೆ.''

ವಿಜಯೆ ಹೊರಗೆ ನೋಡುತ್ತ ನಿಂತಿದ್ದಳು. ಹಾಗೆಯೇ ನುಡಿದಳು. "ಜಗತ್ತಿನಲ್ಲಿ ಸಹಾನುಭೂತಿ ಎಂಬ ವಸ್ತುವಿದೆ. ನೀವು ಅದನ್ನು ಎಲ್ಲಿಯಾದರೂ ನೋಡಿರಬಹುದು."

"ಸಹಾನುಭೂತಿ! ಉದಾರತೆ ಇರಬಹುದು." ಎಂದವನೇ ನಿಟ್ಟುಸಿರಿಟ್ಟ. ಆಮೇಲೆ ಇನ್ನೊಮ್ಮೆ ಕೈಯೆತ್ತಿ ನಮಸ್ಕರಿಸಿ "ಏನೇ ಆಗಲಿ.

ಹೇಗಾದರೂ ತಂದೆಯ ಸಾಲ ತೀರಿದ್ದರಿಂದ ನಾನು ಸುಖಿಯಾಗಿರವೆ. ನಿಮ್ಮ ದೇವಾಲಯದ ಉತ್ತರೋತ್ತರವಾಗಲಿ. ಇಂದಿನ ದಿನವನ್ನು ಎಂದಿಗೂ ಮರೆಯಲಾರೆ." ಎಂದವನೇ ಹೊರಟ. ಹೊರಗೆ ಹೋಗಿ ಮುಟ್ಟುವಷ್ಟರಲ್ಲಿಯೇ "ತುಸು ತಡೆಯಿರಿ" ಎಂದು ಕೂಗಿದಂತಾಯಿತು.

ನರೇಂದ್ರನು ತಿರುಗಿ ಬಂದೊಡನೆಯೇ ವಿಜಯೆಯು ನಗುತ್ತ "ನಿಮ್ಮ ಮ್ಯೊಕ್ರೊಸ್ಕೋಪಿನ ಬೆಲೆ ಎಷ್ಟು?" ಎಂದು ಕೇಳಿದಳು.

"ತೆಗೆದು ಕೊಳ್ಳುವಾಗ ೫೦೦ ಕ್ಕಿಂತಲೂ ಹೆಚ್ಚಿಗೆ ಬೆಲೆ ಬಿದ್ದಿತ್ತು. ಈಗ ೨-೨॥ ಸಿಕ್ಕರೂ ಮಾರಿ ಬಿಡುವೆ. ಯಾರಾದರೂ ಕೊಳ್ಳುವವರಿದ್ದರೆ ತಿಳಿಸಿ. ಮಾಲು ಹೊಸದೇ ಇದೆ."

ಮಾರುವದಕ್ಕೆ ಆತನಿಗಿರುವ ಉತ್ಸುಕತೆಯನ್ನು ಕಂಡು ವಿಜಯೆಯು ದುಃಖಿತಳಾಗಿ "ಇಷ್ಟು ಕಡಿಮೆ ಬೆಲೆಗೆ ಕೊಡವಿರಾ? ನಿಮಗದರ ಅವಶ್ಯಕತೆ ಇಲ್ಲವೆ?

ನರೇಂದ್ರನು ನಿಟ್ಟುಸಿರಿಟ್ಟ. "ಎಲ್ಲಿಯ ಕೆಲಸ? ಏನೂ ಆಗಲಿಲ್ಲ."

ಈ ಉಸಿರಿನ ಅರ್ಥ ವಿಜಯೆಗೆ ಆಗದೆ ಹೋಗಲಿಲ್ಲ. ಕೆಲ ಹೊತ್ತು ತಡೆದು ಆಕೆ "ನನಗೂ ಬಹಳ ದಿನದಿಂದ ಒಂದನ್ನು ಕೊಳ್ಳಬೇಕೆಂಬ ಬಯಕೆ ಇತ್ತು. ಆದರೆ ಸಾಧ್ಯವಾಗಿರಲಿಲ್ಲ. ಅದನ್ನೊಮ್ಮೆ ನಾಳೆ ತೋರಿಸುತ್ತೀರಾ?"

"ತೋರಿಸುವೆ. ನಾನು ನಾಳೆ ತಂದು ತೋರಿಸಿ ಹೋಗುವೆ. ಅದನ್ನು ಕೊಳ್ಳುವುದರಿಂದ ನಿಮಗೇನೂ ಹಾನಿಯಿಲ್ಲ: ಅದೊಂದು ಅಮೌಲ್ಯ ವಸ್ತು. ನನಗೆ ಅನ್ಯಥಾ ಮಾರ್ಗವಿಲ್ಲ. ಅದಕ್ಕಾಗಿ—ಆಗಲಿ, ನಾಳೆ ಸಾಯಂಕಾಲ ತಂದು ತೋರಿಸುವೆ."

ಆತ ಕಣ್ಮರೆಯಾಗುವ ವರೆಗೂ ನೋಡುತ್ತಲೇ ನಿಂತು, ನಂತರ ಕುರ್ಚಿಯೊಂದರಲ್ಲಿ ಕುಕ್ಕರಿಸಿದಳು. ಕಣ್ಣು ಕಾಣುವ ವರೆಗೆ ಶೂನ್ಯವೇ ಶೂನ್ಯವೆಂದು ಆಕೆಗೆ ಭಾಸವಾಗಹತ್ತಿತು. ಆಕೆಗೆ ಸಮಯ ಹೇಗೆ ಹೋಗುತ್ತಿದೆ ಎಂಬುದೇ ಗೊತ್ತಾಗಲೊಲ್ಲದು. ಸಂಜೆಯಾದುದು ಯಾವಾಗ? ನೌಕರ ಬಂದು ದೀಪ ಹಚ್ಚಿ ಹೋದುದು ಯಾವಾಗ?—ಇವು ಯಾವವೂ ಗೊತ್ತಾಗಲೇ ಇಲ. ಆದರೆ ಎದೆಯು ಕೊಯ್ದುದ್ದರಿಂದ ಆಕೆಗೆ ಎಚ್ಚರವಾಯಿತು.

ಕೂಡಲೆ ಒರಸಿಕೊಳ್ಳಲು ಹತ್ತಿದಾಗ ತನ್ನ ಕಣ್ಣೀರಿನಿಂದಲೇ ತೊಯ್ದಿದ್ದೆಂದು ಗೊತ್ತಾಯಿತು. ಥೂ, ಇದೇನಾಯಿತು? ಬಂದ ನೌಕರರೆಲ್ಲ ನೋಡಿರಬಹುದು. ಏನೇನು ಯೋಚಿಸಿರಬಹುದೊ? ಕೆಲಸವಿದ್ದರೂ ಆಕೆ ಯಾರನ್ನೂ ಹತ್ತಿರ ಕರೆಯಲಾರಳು. ರಾತ್ರಿಯಲ್ಲಿ ಹಾಸಿಗೆಯ ಮೇಲೆ ಬಿದ್ದು ಕಿಡಕಿಯಿಂದ ಕತ್ತಲೆಯಲ್ಲಿ ಹಾಗೆಯೇ ನೋಡುತ್ತಿದ್ದಳು. ವರ್ಣಹೀನ, ಶೂನ್ಯ ಕತ್ತಲೆಯಂತೆ ಆಕೆಗೆ ತನ್ನ ಭವಿಷ್ಯವೂ ಕತ್ತಲೆಯಿಂದ ಕೂಡಿದಂತೆ ಭಾಸವಾಗ ಹತ್ತಿತು. ಇಂತಹ ಸ್ಥಿತಿಯಲ್ಲಿ ಯಾವಾಗ ನಿದ್ದೆ ಹತ್ತಿತೋ ತಿಳಿಯದು. ಆದರೆ ನಿದ್ದೆ ತಿಳಿದೆದ್ದಾಗ ಎಲ್ಲೆಡೆ ಬೆಳಕು ಹರಡಿತ್ತು.

ಎದ್ದೊಡನೆಯೇ ಆಕೆಗೆ ಎಚ್ಚರಾದುದು ಇದೇ ವ್ಯಕ್ತಿಯದು. ಆಕೆಗೆ ಬಿದ್ದ ಕನಸಿನಲ್ಲಿಯೂ ಅದೇ ವ್ಯಕ್ತಿಯ ಸಂಬಂಧವಿದ್ದಿತು.

ಹೊತ್ತು ಏರಿತು. ಆದರೆ ಆಕೆಗೆ ಯಾತರಲ್ಲಿಯೂ ಮನಸ್ಸಿರಲಿಲ್ಲ. ಈ ಸ್ಥಿತಿಯನ್ನು ನೆನೆದು ಆಕೆಗೇ ನಾಚಿಕೆಯೆನಿಸುತ್ತಿತ್ತು. "ಹೇಗಾದರೂ ಆತ ಬಂದೇ ಬರುವ. ಯಂತ್ರ ಕೊಂಡೇ ಕೊಳ್ಳುವೆ. ನಾಳೆ ಬರಬಹುದು" ಇತ್ಯಾದಿ ಸಮಾಧಾನ ಹಚ್ಚಿಕೊಳ್ಳಲು ಬಗೆದರೂ ಸಾಧ್ಯವಾಗಲಿಲ್ಲ. ಹೊತ್ತಿನ ಜೊತೆಗೆ ಕುತೂಹಲವೂ ಹೆಚ್ಚ ಹತ್ತಿತು. ಪೌಷ್ಯಮಾಸದ ಸೂರ್ಯ ಗಗನ ಮಧ್ಯದಿಂದ ಪಶ್ಚಿಮ ದಿಕ್ಕಿಗೆ ಹೊರಡಹತ್ತಿದುದನ್ನು ಕಂಡು ಆಕೆಗೆ ನಿರಾಶೆಯೆನಿಸಹತ್ತಿತು. ನಾಳೆ ದೂರ ದೇಶಕ್ಕೆ ಹೋಗುವಾತ. ಸಿದ್ಧತೆಯಲ್ಲಿ ಇತ್ತ ಬರಲು ಮರೆತಿದ್ದರೂ ಮರೆತಿರಬಹುದು. ಅಲ್ಲದೆ ತನ್ನ ಯಂತ್ರವನ್ನು ಹೆಚ್ಚು ಬೆಲೆ ಬಂದಲ್ಲಿ ಯಾರಿಗಾದರೂ ಮಾರಿದ್ದರೆ ತಪ್ಪೇನು? ಆತ್ರ ಹೋಗುವಾಗ ನಾನೇನೂ ವಿಶೇಷ ಆಗ್ರಹಪಡಿಸಿಯೂ ಇಲ್ಲ. ಅಂದ ಬಳಿಕ ನನಗೆ ಸಾಕಷ್ಟು ಮನಸ್ಸಿಲ್ಲವೆಂದು ತಿಳಿದು ಆತ ಬರದಿದ್ದರೆ ಯಾರ ದೋಷ? ಯಾರಿಗಾದರೂ ಕಳಿಸಿದರಾಗುತ್ತಿತ್ತು ಎಂದು ಯೋಚಿಸಿದಳೊಮ್ಮೆ. ಕಳಿಸಿದರೂ ಸಿಗದಿದ್ದರೆ— ಎಂದು ಶಂಕಿಸುವಳಿನ್ನೊಮ್ಮೆ. ಈ ರೀತಿ ತರ್ಕವಿತರ್ಕಮಾಡುತ್ತ, ಕೋಣೆಯ ಒಳ ಹೊರಗೆ ಅಸ್ಥಿರತೆಯಿಂದ ಅಡ್ಡಾಡುತ್ತ, ನಿಮಿಷವನ್ನು ಯುಗದಂತೆ ಕಳೆಯುತ್ತಿದ್ದಳು. ಅಷ್ಟೊತ್ತಿಗೆ ಪರಿಚಾರಕನು ಬಂದು "ಅಮ್ಮಾ, ಬಾಬೂ ಬಂದಿದ್ದಾರೆ ಕೆಳಗೆ ಬಾ" ಎಂದ.

ವಿಜಯೆಯ ಮುಖ ಬಿಳುಪೇರಿತು. "ಯಾರೋ ಬಂದವರು?"

"ನಿನ್ನೆ ಬಂದವರೇ. ಅವರ ಕೈಯಲ್ಲಿ ದೊಡ್ಡದೊಂದು ಚರ್ಮದ ಪೆಟ್ಟಿಗೆಯಿದೆ."

"ಒಳ್ಳೇದು. ಅವರಿಗೆ ಕೂಡ್ರಲು ಹೇಳು. ಇದೇ ಈಗ ಬಂದೆ."

ಎರಡು ಮೂರು ನಿಮಿಷಗಳಲ್ಲಿಯೇ ವಿಜಯೆಯು ಬಂದು ನಮಸ್ಕರಿಸಿದಳು. ಆಕೆಯ ನಡತೆಯಲ್ಲಿ ಸಿಂಗರಿಸಿದ ರೀತಿಯಲ್ಲಿ ಒಂದು ವೈಶಿಷ್ಟ್ಯವಿದೆಯೆಂದು ಯಾರಾದರೂ ಹೇಳುವಂತಿತ್ತು. ನಿನ್ನಿನ ಹಾಗೂ ಇಂದಿನ ರೀತಿಯಲ್ಲಾದ ಪರಿವರ್ತನೆಯನ್ನು ಕಂಡು, ನರೇಂದ್ರನ ಬಾಯಿಂದ ಮಾತೇ ಹೊರಡಲಿಲ್ಲ. ಆತನ ವಿಸ್ಮಿತ ದೃಷ್ಟಿ ತನ್ನ ದೃಷ್ಟಿಯೊಡನೆ ಬೆರೆಯಲು ಆಕೆ ತುಂಬಾ ನಾಚಿಕೆಪಟ್ಟುಕೊಂಡಳು, ಮೈಕ್ರೊಸ್ಕೋಪದ ಬ್ಯಾಗು ಆತನ ಕೈಯಲ್ಲಿಯೇ ಇತ್ತು. ಅದನ್ನು ಆತ ಮೇಜಿನ ಮೇಲಿಟ್ಟು "ನಮಸ್ಕಾರ. ವಿಲಾಯತಿಯಲ್ಲಿದ್ದಾಗ ಚಿತ್ರಕಲೆಯನ್ನು ಅಭ್ಯಸಿಸಿದ್ದೆ. ನಿಮ್ಮನ್ನು ಅನೇಕ ಸಲ ನೋಡಿರುವೆ. ಆದರೂ ಇಂದಿನ ರೀತಿಯಲ್ಲಿ ನಿಮ್ಮ ಚಿತ್ರ ವಿರಬೇಕಾದುದು ಒಳಿತೆಂದು ಅನಿಸಹತ್ತಿದೆ. ಎಂತಹ ಅನುಪಮ ಸೌಂದರ್ಯ!"

ಇದು ನಿಷ್ಕಪಟವಾದ ಸೌಂದರ್ಯ ಪ್ರೀತಿಯೆಂದು ಆಕೆಗನಿಸಿತು. ಆದರೂ ತನ್ನಲ್ಲಾದ ಪರಿವರ್ತನೆಯನ್ನು ಬಚ್ಚಿಡುವುದು ಸಾಧ್ಯವಿದ್ದಿಲ್ಲ. ಆದರೂ ತುಸು ಹೊತ್ತಿನಲ್ಲಿಯೇ ಸಾವರಿಸಿ, ಗಂಭೀರವಾಗಿ ನುಡಿದಳು. "ನಿಮ್ಮ ಮಾಲೊಂದನ್ನು ಕೊಳ್ಳಲೆಂದು ನಿಮ್ಮನ್ನು ಆಮಂತ್ರಿಸಿದ್ದೆ. ಆದರೆ ಚಿತ್ರ ತೆಗೆಯಲಿಕ್ಕಲ್ಲ." ಇದನ್ನು ಕೇಳಿ ಆತನ ಮೋರೆ ಬಾಡಿತು. ಆತನಿಗೆ ತುಂಬಾ ನಾಚಿಕೆಯಾದುದರಿಂದ ಕ್ಷಮೆಬೇಡುವವರಂತೆ "ನಾನು ಬೇರಾವ ವಿಚಾರದಿಂದಲೂ ಕೇಳಿರಲಿಲ್ಲ. ನನ್ನದೇ ತಪ್ಪಾಯಿತು. ಇನ್ನೆಂದೂ...." ಎಂದು ಹೇಳಹತ್ತಿದ. ಆತನಿಗಾದ ಪಶ್ಚಾತ್ತಾಪವನ್ನು ಕಂಡು ವಿಜಯೆ ನಕ್ಕಳು. ಆ ಪ್ರಶಾಂತಸ್ನಿಗ್ಧ ನಗೆಯಿಂದ ಆ ಸ್ಥಳ ತುಂಬಿತು. "ಎಲ್ಲಿದೆ ನೋಡುವಾ, ನಿಮ್ಮ ಯಂತ್ರ"

ನರೇಂದ್ರನ ಜೀವದಲ್ಲಿ ಜೀವ ಬಂದಿತು. "ಇಗೊಳ್ಳಿ, ತೋರಿಸುತ್ತೇನೆ" ಎಂದವನೇ ಪೆಟ್ಟಿಗೆ ತೆರೆಯಹತ್ತಿದ. ಆ ಕೋಣೆಯಲ್ಲಿ ಬೆಳಕು

ಕಡಿಮೆಯಾಗುತ್ತ ಬಂದಿದ್ದಿತು. ಆದುದರಿಂದ "ಆ ಕೋಣೆಯಲ್ಲಿ ಇನ್ನೂ ಪ್ರಕಾಶವಿದೆ. ಅಲ್ಲಿಗೆ ಹೋಗೋಣ" ಎಂದು ವಿಜಯೆ ಎದ್ದಳು.

"ಆಗಲಿ" ಎಂದು ಆಕೆಯನ್ನು ಹಿಂಬಾಲಿಸಿದ. ಸಣ್ಣ ಮೇಜಿನ ಮೇಲೆ ಯಂತ್ರವನ್ನಿಟ್ಟು ಇಬ್ಬರೂ ಕುರ್ಚಿಯನ್ನೆಳೆದು ಕುಳಿತುಕೊಂಡರು. "ಇಗೊಳ್ಳಿ, ಇದರ ಉಪಯೋಗವನ್ನು ಹೇಳುತ್ತೇನೆ." ಎಂದು ನರೇಂದ್ರ ಮಾತಿಗೆ ಪೀಠಿಕೆ ಹಾಕಿದ.

"ಇದರ ಅದ್ಭುತ ಸಾಮರ್ಥ್ಯ ಕಣ್ಣಿಂದ ಕಂಡವರಿಗಲ್ಲದೆ ಇತರರಿಗೆ ಊಹಿಸುವುದು ಅಸಾಧ್ಯ. ವಿಲಾಯತಿಯಲ್ಲಿ ವೈದ್ಯಕಿಯನ್ನು ಅಭ್ಯಾಸ ಮಾಡಿದ ಬಳಿಕ ನಾನು ಈ ಜೀವಾಣು ಶಾಸ್ತ್ರವನ್ನು ಅಭ್ಯಸಿಸಹತ್ತಿದೆ. ಹೆಚ್ಚು ಹೆಚ್ಚು ಅಭ್ಯಸಿಸಿದಂತೆ ಜ್ಞಾನದ ಜೊತೆಗೆ ಆನಂದವೂ ಉಂಟಾಗ ಹತ್ತಿತು. ಅದಕ್ಕೆ ಸಂಬಂಧಪಟ್ಟ ಎಷ್ಟೋ ಸಂಗತಿಗಳನ್ನು ಕಲೆಹಾಕಿದ್ದೆ. ಅವನ್ನೆಲ್ಲ ನಿಮಗೆ ಕೊಡಲು ತಂದಿರುವೆ. ಇವಿಲ್ಲದೆ ಯಂತ್ರದಿಂದ ಸಾಕಷ್ಟು ಲಾಭವಾಗಲಾರದು" ಎಂದು ಹೇಳಿ ನೋಡಲು ಹೇಳಿದ. ಮೊದಲಂತೂ ಆಕೆಗೆ ಏನೂ ಕಾಣಿಸಲಿಲ್ಲ. ದಿಟ್ಟಿಸಿ ನೋಡಲು ಅಸ್ಪಷ್ಟವಾಗಿ ಏನೋ ಕಂಡಂತೆ ಭಾಸವಾಯಿತು. ನರೇಂದ್ರನು ನೋಡಿದುದನ್ನು ಹೇಳಲು ಒತ್ತಾಯ ಪಡಿಸುತ್ತಿದ್ದ. ಆದರೆ ಆಕೆಗೆ ನಗು ಬರುತ್ತಿತ್ತು. ಹೀಗೆ ನೋಡಿರಿ ಎಂದು ಆತ ಹೇಳಿದಂತೆಲ್ಲ ಆಕೆಗೆ ನಗೆ ತಡೆಹಿಡಿಯಲಾಗುತ್ತಿದ್ದಿಲ್ಲ. ಇದನ್ನೆಲ್ಲ ಕಂಡು ನರೇಂದ್ರನಿಗೆ ಬೇಸರಕ್ಕಿಟ್ಟುಕೊಂಡಿತು. "ಇದು ನಿಮಗೆ ಹೇಳಿದುದಲ್ಲ. ಹೋಗಿ, ಇಂತಹ ಬರಡು ಬದ್ಧಿಯವರನ್ನು ನಾನೆಲ್ಲಿಯೂ ಕಂಡಿರಲಿಲ್ಲ" ಎಂದ.

"ಕುಣಿಯಲು ತಿಳಿಯದಿದ್ದರೆ ಅಂಗಳ ಡೊಂಕು"

"ನಿಮಗೆ ಹೇಗೆ ತಿಳಿಸಿಲಿ? ನಿಮ್ಮ ಬುದ್ಧಿ ಮಂದವಾಗಿರಬೇಕು. ಇಲ್ಲವೆ ನಿಮಗೆ ಮನಸ್ಸಿಲ್ಲದಿರಬೇಕು. ನಾನು ಕಷ್ಟಪಟ್ಟು ನಿಮಗೆ ಹೇಳಿ ಕೊಡಲು ಯತ್ನಿಸುತ್ತಿದ್ದೇನೆ. ಆದರೆ ನೀವು ಮಾತ್ರ ಮೋರೆ ಕೆಳಗೆಹಾಕಿ ನಗುತ್ತಿದ್ದೀಯೆ"

"ನಗುವೆನೆಂದು ನಿಮಗಾರೆಂದರು?"

"ನಾನೇ ಹೇಳುವೆ."

"ಅದು ನಿಮ್ಮ ಕಲ್ಪನೆಯೇ ಹೊರತು ದಿಟವಲ್ಲ."

"ಇರಲಿ. ಇದು ನನ್ನ ಕಲ್ಪನೆಯೆಂದು ತಿಳಿಯುವಾ. ಆದರೆ ಯಂತ್ರ ವೇನೂ ನನ್ನ ಕಲ್ಪನೆಯಲ್ಲವಷ್ಟೇ!"

"ನಿಮ್ಮ ಯಂತ್ರ ಚನ್ನಾಗಿಲ್ಲ."

ನರೇಂದ್ರನಿಗೆ ಆಶ್ಚರ್ಯವಾಯಿತು. "ನೆಟ್ಟಗಿಲ್ಲ? ನಮ್ಮ ದೇಶದಲ್ಲಿ ಇಂತಹ ಯಂತ್ರವಿದ್ದುದು ಕೇವಲ ಬೆರಳಿಸಿಂದೆಣಿಸುವಷ್ಟು ಜನರಲ್ಲಿ ಮಾತ್ರ. ಇದರಲ್ಲಿ ಕಾಣಿಸುವಷ್ಟು ಚನ್ನಾಗಿ ಇನ್ನಾವುದದ್ದರಿಂದಲೂ ಕಾಣಿಸಲಾರದು. ನಿಜವಾಗಿಯೂ ಈ ಯಂತ್ರ ಕೆಟ್ಟಿಲ್ಲ. ಮೋಸಮಾಡಿ ನಿಮ್ಮಿಂದ ಹಣ ಎತ್ತುವ ಹಂಚಿಕೆ ನನ್ನದಲ್ಲ. ಇದರ ಸತ್ಯಾಂಶ ಮುಂದೆ ತಿಳಿದೀತು."

"ಮುಂದೆ ತಿಳಿದೇನು ಮಾಡಲಿ? ಆಗ ನಿಮ್ಮನ್ನು ಎಲ್ಲಿ ಹುಡುಕಲು ಹೋಗಲಿ?"

ನರೇಂದ್ರನ ಸ್ವರ ತೀವ್ರವಾಯಿತು. "ನೀವು ತೆಗೆದುಕೊಳ್ಳುತ್ತೇವೆಂದು ಯಾಕೆ ಹೇಳಿದಿರಿ? ನನಗೇಕೆ ವ್ಯರ್ಥವಾಗಿ ತೊಂದರೆಗೆ ಹಾಕಿದಿರಿ?"

ವಿಜಯೆಯೂ ಗಾಂಭಿರ್ಯದಿಂದ "ಇದು ಹಾಳಾಗಿದೆಯೆಂದು ನೀವು ಮೊದಲೇ ತಿಳಿಸಲಿಲ್ಲವಲ್ಲ?"

ನರೇಂದ್ರ ಬಂದ ಸಿಟ್ಟನ್ನು ಸಾವರಿಸಿ ಎದ್ದ. 'ಒಳ್ಳೇದು, ನಿಮ್ಮದೇ ನಿಜವಾಗಲಿ. ನಿಮ್ಮೊಡನೆ ವ್ಯರ್ಥವಾಗಿ ಇನ್ನು ವಾದಿಸಲಾರೆ. ಹೌದು ಈ ಯಂತ್ರವೇ ಹಾಳು. ನಾಳೆ ಹೋಗದಂತೆ ಮಾಡಿದಿರಿ ಅಷ್ಟೇ. ಆದರೆ ಎಲ್ಲರೂ ನಿಮ್ಮಂತೆ ಕುರುಡರಲ್ಲ. ಇದನ್ನು ಅನಾಯಾಸವಾಗಿ ಕಲಕತ್ತೆಯಲ್ಲಿ ಮಾರುವೆ. ಒಳ್ಳೇದು ಹೋಗಿಬರುತ್ತೇನೆ—" ಎಂದು ಯಂತ್ರವನ್ನೆಲ್ಲ ಪೆಟ್ಟಿಗೆಯಲ್ಲಿ ತುಂಬತೊಡಗಿದ.

ವಿಜಯೆಯು ಗಂಭೀರವಾಗಿ "ಈಗ ಹೇಗೆ ಹೋಗುವಿರಿ? ಊಟ ಮಾಡಿಯೇ ಹೋಗಿರಿ" ಎಂದಳು.

"ಇಲ್ಲ, ಊಟದ ಅವಶ್ಯಕತೆ ಇಲ್ಲ."

"ಯಾಕೆ?"

"ನೀವೇನೂ ನನ್ನ ಉಪಹಾಸ ನಡಿಸಿಲ್ಲವಷ್ಟೇ?"

“ನಿನ್ನೆ ನಿಮಗೆ ಊಟಕ್ಕೆ ಹೇಳಿದುದು ಪರಿಹಾಸಕ್ಕಾಗಿಯೇ? ಎಲ್ಲ ಇರಲಿ. ನೀವು ಊಟ ತೀರಿಸಿಯೇ ಹೋಗಬೇಕು. ತುಸು ಕೂತಿರಿ. ನಾನು ಈಗಲೇ ಬರುವೆ” ಎಂದು ತನ್ನ ನಗೆಯನ್ನು ಬಿಗಿಹಿಡಿದು ಸೌಂದರ್ಯವನ್ನು ಪ್ರತಿಫಲಿಸುತ್ತ ಕೋಣೆಯಿಂದ ಹೊರಕ್ಕೆ ನಡೆದಳು. ಸುಮಾರು ೫ ನಿಮಿಷಗಳ ನಂತರ ಕೈಯಲ್ಲಿ ಅನ್ನದ ತಾಟನ್ನೂ, ನೌಕರನ ಕೈಯಲ್ಲಿ ಚಹಾದ ಸಾಮಾನನ್ನೂ—ತೆಗೆದುಕೊಂಡು ಬಂದಳು. ಮೇಜು ಖಾಲಿಯಾಗಿದ್ದುದನ್ನು ಕಂಡು ನುಡಿದಳು,

“ಎಷ್ಟು ಬೇಗನೇ ಎಲ್ಲವನ್ನೂ ತೆಗೆದಿಟ್ಟಿರಿ. ನೀವು ಕಡಿಮೆ ಸಿಟ್ಟಿನವರಲ್ಲ” ಎಂದಳು. ನರೇಂದ್ರನಿಗೆ ಬೇಸರವಾಗಿತ್ತು: “ನೀವು ಕೊಳ್ಳದಿದ್ದರೆ ಸಿಟ್ಟೇತರದು? ಆದರೆ ಇಂತಹ ಭಾರವಾದ ವಸ್ತುವನ್ನು ಅಲ್ಲಿಂದಿಲ್ಲಿಗೆ ತಂದು ಹೊತ್ತುಕೊಂಡು ಹೋಗವುದು ಕಷ್ಟಪ್ರದವೆಂದು ನಿಮಗನಿಸುವದಿಲ್ಲವೇ?”

ವಿಜಯೆ ಥಾಲಿಯನ್ನು ಮೇಜಿನಮೇಲಿಟ್ಟಳು. “ಅದೇನೋ ನಿಜ. ಆದರೆ ಅದು ನಿಮ್ಮ ಸಲುವಾಗಿಯೇ ಹೊರತು ನನ್ನ ಸಲುವಾಗಿಯಲ್ಲ. ಆಗಲಿ, ಕುಳಿತುಕೊಳ್ಳಿರಿ. ನಾನು ಚಹಾ ತಯಾರಿಸಿ ಕೊಡುವೆ.”

ಆತ ಕುಳಿತಂತೆಯೇ ಇದ್ದುದನ್ನು ಕಂಡು ಆಕೆಯೇ ಮಾತು ಮುಂದರಿಸಿದಳು.

“ಆಗಲಿ, ಹಾಗಾದರೆ ನಾನೇ ತೆಗೆದುಕೊಳ್ಳುವೆ. ತಿರುಗಿ ತೆಗೆದ್ಕೊಂಡು ಹೋಗುವ ಕಷ್ಟ ನಿಮಗೆ ಬೇಡ. ನೀವು ತಿನ್ನಲು ಪ್ರಾರಂಭಿಸಿರಿ.”

ನರೇಂದ್ರ ತನ್ನ ಅಪಮಾನವಾಯಿತೆಂದು ಭಾವಿಸಿದ. “ನಿಮ್ಮೊಡನೆ ದಯೆ ತೋರಿರೆಂದು ಬೇಡಲು ನಾನು ಬಂದಿಲ್ಲವಷ್ಟೆ?”

ಆದರೂ ಆ ದಿನ ಮಾವನ ವತಿಯಿಂದ ಮಾತ್ರ ಬಂದಿದ್ದಿರಲ್ಲ!”

ಅದು ಹೆರವರ ಸಲುವಾಗಿ. ನನಗಾಗಿಯಲ್ಲ. ಈ ಅಭ್ಯಾಸ ನನ

ಈ ಮಾತಿನ ನಿದರ್ಶನ ಆಕೆಗಿತ್ತು, ಅದಕ್ಕಾಗಿ ಮನಸ್ಸಿಗೆ ಬೇಸರವಾಯಿತು. “ಏನೇ ಆಗಲಿ, ನೀವು ಇದನ್ನು ತಿರುಗಿ ತೆಗೆದುಕೊಂಡು ಹೋಗುವ ಅವಶ್ಯಕತೆ ಇಲ್ಲ. ಅದನ್ನು ನಾನೇ ಕೊಳ್ಳುವೆ. ಒಳ್ಳೇದು. ಈಗ ಊಟ ಮಾಡಿರಿ.”

" ಹಾಗೆಂದರೆ ? " ಆತನಿಗಿನ್ನೂ ಸಂದೇಹ ತೊಲಗಿರಲಿಲ್ಲ.

" ಏನಾದರೂ ಇದ್ದೇ ಇದೆ. "

ಈ ಉತ್ತರ ಕೇಳಿ ನರೇಂದ್ರ ಕೆಲ ಹೊತ್ತು ನೀರವವಾದ. ಆತನು ಮನಸ್ಸಿನಲ್ಲಿಯೇ ಇದರ ಕಾರಣವನ್ನು ಊಹಿಸಿ ತುಂಬಾ ಸಿಟ್ಟಿಗೆದ್ದ. " ಇದರ ಉದ್ದೇಶವೇನು ? ಸ್ಪಷ್ಟವಾಗಿ ಹೇಳಿರಿ. ಇದನ್ನು ಕೊಳ್ಳುವ ನೆಪ ಮಾಡಿ, ಎತ್ತಿ ಹಾಕುವ ಬಯಕೆಯೋ ? ನಮ್ಮ ತಂದೆಯವರು ಇದನ್ನೂ ಅಡುವಾಗಿಟ್ಟಿದ್ದರೇ ? ಅಂದ ಬಳಿಕ ತಂದೆಯವರು ನಿಮ್ಮನ್ನೂ ಅಡುವಾಗಿಟ್ಟಿದ್ದರೆಂದು ಹೇಳಿ ನೀವು ನನ್ನನ್ನೂ ಪ್ರತಿಬಂಧಿಸಬಹುದೆ?. "

ವಿಜಯೆಗೆ ಸಿಟ್ಟು ಬಂದಿತು. ಆಕೆ ಗೋಣನ್ನಲ್ಲಾಡಿಸಿ " ಕಾಲೀಪದ, ಇಲ್ಲಿ ನಿಂತೇನು ನೋಡುತ್ತಿರುವಿ ? ಅವನ್ನೆಲ್ಲ ಇಲ್ಲಿ ಇಟ್ಟು ಹೋಗು "

"ನೌಕರನು ಕಿಟಲಿ ಕಪ್ಪು ಬಸಿಗಳನ್ನೆಲ್ಲ ಟೇಬಲ್ಲಿನ ಒಂದು ಬದಿಯಲ್ಲಿಟ್ಟು ಹೋದ. ವಿಜಯೆಯು ನೀರವವಾಗಿ ತಲೆ ಕೆಳಗೆ ಹಾಕಿ ಚಹಾ ಮಾಡಹತ್ತಿದಳು. ಇತ್ತ ನರೇಂದ್ರ ಸಿಟ್ಟಿನಿಂದ ಮೋರೆ ಉಬ್ಬಿಸಿ ಕುಳಿತಿದ್ದ.

೧೨

ಸೃಷ್ಟಿ ರಚನೆಯ ಅದ್ಭುತ ವ್ಯಾಪಾರವನ್ನು ವಿಜಯೆ ಅನೇಕ ಪಂಡಿತರ ಬಾಯಿಂದ ಕೇಳಿದ್ದಳು. ಆದರೆ ಅದರ ಹುಟ್ಟು, ಅದರ ಇತಿಹಾಸ, ಅದರ ಕಾರ್ಯ, ಅದರ ರೀತಿ ನೀತಿ—ಇವನ್ನೆಲ್ಲ ಇಷ್ಟು ಶಿಳಿಯಾಗಿ ತಿಳಿಸಿದವರಾರೂ ಇರಲಿಲ್ಲ. ಈಗ ತಾನೇ ಮುರುಕು ಯಂತ್ರವೆಂದು ಹೀಯಾಳಿಸಿದ ಯಂತ್ರದಿಂದಲೇ ಎಂತೆಂತಹ ಅದ್ಭುತಗಳು ದೃಗ್ಗೋಚರವಾದವು ? ಪ್ರಾಣಿ ಮಾತ್ರರ ಸಂಬಂಧದಲ್ಲಿ ಆತನಿಗಿದ್ದ ಜ್ಞಾನ, ಆತ್ಮ ವಿಶ್ವಾಸ, ಅದ್ಭುತ ಸ್ಮರಣ ಶಕ್ತಿ, ಇವನ್ನೆಲ್ಲ ಕಂಡು ಆಕೆ ಅಪ್ರತಿಭಳಾದಳು. ಆಕೆ ಎಷ್ಟೋ ಕೇಳಿದಳು. ಎಷ್ಟೋ ಮರೆತಳು. ಆತನ ಮೋರೆಯೆಡೆಗೇ ದಿಟ್ಟಿಸುತ್ತ ನೀರವವಾಗಿ ಕುಳಿತಿದ್ದಳು. ಆತನ ತ್ಯಾಗ, ಸಾರಳ್ಯ, ಸಾಧುತ್ವ ಇವನ್ನೆಲ್ಲ ನೆನೆದು ಸ್ನೇಹ, ಶ್ರದ್ಧಾ ಭಕ್ತಿಗಳಿಂದ ಆಕೆಯ ಹೃದಯ ತುಂಬಿ ಬಂದಿತ್ತು.

ನರೇಂದ್ರನಿಗೆ ತಾನು ಸುಮ್ಮನೇ ಹೇಳುತ್ತಿದ್ದೇನೆಂದು ಅನಿಸಿತು, " ನಿಮ್ಮ ಲಕ್ಷವೆಲ್ಲಿದೆ ? "

" ನಾನು ಕೇಳುತ್ತಲೇ ಇದ್ದೇನೆ "

"ಏನು ಕೇಳಿದ್ದ? ಹೇಳಿ ನೋಡುವಾ

"ವ್ಹಾ. ಒಂದೇ ದಿನದಲ್ಲಿ ಎಲ್ಲ ಕಲಿತು ಬಿಡುತ್ತಾರೆಯೇ?"

ನರೇಂದ್ರ ಹತಾಶನಾದ. "ಇಲ್ಲ. ನೀವು ಏನೂ ಕಲಿಯಲಾರಿರಿ. ನಿಮ್ಮಂತಹ ಅನ್ಯಮನಸ್ಕ ವ್ಯಕ್ತಿಯನ್ನು ನಾನೆಲ್ಲಿಯೂ ಕಂಡಿರಲಿಲ್ಲ"

"ಎಲ್ಲರೂ ಒಂದೇ ದಿನದಲ್ಲಿ ಕಲಿತು ಬಿಡುತ್ತಾರೆಯೇ? ಇದನ್ನೆಲ್ಲ ನೀವು ಒಂದೇ ದಿನದಲ್ಲಿ ಕಲಿತಿದ್ದೀರಾ? ನರೇಂದ್ರ ಗಹಗಹಿಸಿ ನಕ್ಕ. ನೀವು ಒಂದು ನೂರು ವರ್ಷದಲ್ಲಿಯೂ ಕಲಿಯಲಾರಿರಿ. ಅಲ್ಲಿಯ ತನಕ ಕಲಿಸುವವರಾದರೂ ಯಾರು?" ವಿಜಯೆಯು ನಕ್ಕು "ನೀವು ಇಲ್ಲ ವಾದರೆ ಈ ಮುರುಕು ಯಂತ್ರವನ್ನು ಕೊಳ್ಳುವವರು ಯಾರು?"

ನರೇಂದ್ರ ಗಂಭೀರನಾದ. "ನನ್ನಿಂದ ಕಲಿಸಲಿಕ್ಕೂ ಶಕ್ಯವಿಲ್ಲ. ನೀವು ಕೊಳ್ಳುವುದೂ ಬೇಡ."

"ಹಾಗಾದರೆ ಚಿತ್ರ ತೆಗೆಯುವದನ್ನಾದರೂ ಕಲಿಸಿರಿ., ಅದನ್ನಾದರೂ ಕಲಿಯುವೆ"

"ಅದೂ ಶಕ್ಯವಿಲ್ಲ. ಇಂತಹ ಊಟ-ತಿನಿಸನ್ನು ಸಹ ಮರೆಸುವ ಆಟ ವನ್ನು ನೀವು ಸರಿಯಾಗಿ ತಿಳಿದುಕೊಳ್ಳಲಾರದಮೇಲೆ ಚಿತ್ರಕಲೆಯಲ್ಲಿ ಮನಸ್ಸು ಹಾಕುವುದು ನಿಜವೇ?

"ನನ್ನಿಂದ ಅದೂ ಸಾಧ್ಯವಿಲ್ಲವೇ?"

"ಇಲ್ಲ"

ವಿಜಯೆಯು ಗಾಂಭೀರ್ಯವನ್ನು ನಟಿಸಿ "ಸುಮ್ಮನೇ ಹೇಗೇಕೆ ಹೇಳುವಿರಿ? ತಮಗೆ ಕಲಿಸಲು ಬರುವದಿಲ್ಲವೇನು? ಒಂದೇ ಮಾತಿನಿಂದ ಹೇಳಿದರಾಗದೆ? —ಆದರೆ, ಮನೆಯಲ್ಲಿನ್ನೂ ದೀಪವನ್ನೇಕೆ ಹಚ್ಚಿಲ್ಲ, ನೌಕರ ರೆಲ್ಲ ಏನು ಮಾಡುತ್ತಿದ್ದಾರೆ? ತುಸು ತಡೆಯಿರಿ. ನಾನು ದೀಪ ಹಚ್ಚಲು ಹೇಳಿ ಬರುತ್ತೇನೆ." ಎಂದು ಬಾಗಿಲ ಪರದೆ ಸರಿಸಿ ತೀವ್ರವಾಗಿ ಹೊರಗೆ ಹೊರಟವಳೇ ಭೂತ ಕಂಡವರಂತೆ ಬೆಪ್ಪಾಗಿ ನಿಂತಳು. ಹೊರಗಿನ ದಿವಾಣ ಖಾನೆಯಲ್ಲಿ ಸಿತಾ ಪುತ್ರರು ಎರಡು ಖುರ್ಚಿಗಳ ಮೇಲೆ ವಿರಾಜಮಾನರಾಗಿ ದ್ದರು. ವಿಲಾಸನ ಮೋರೆ ಕಪ್ಪಿಟ್ಟಿತ್ತು. ಆಕೆ ತನ್ನನ್ನು ಸಾವರಿಸಿಕೊಂಡು "ಕಾಕಾಜಿ ಎಂದು ಬಂದಿರಿ? ನನಗೆ ಹೇಳಬಾರದಿತ್ತೇ? ಎಂದಳು.

ರಾಸಬಿಹಾರಿಯು ಒಣನಗೆ ನಕ್ಕು "ಸುಮಾರು ಅರ್ಧ ತಾಸಾಯಿತು. ಮಗೂ, ನೀನು ಮಾತಾಡುವುದರಲ್ಲಿ ಮಗ್ನಳಾಗಿರುವಿಯೆಂದು ಕರೆಯಲಿಲ್ಲ. ಅವನು ಜಗದೀಶನ ಮಗನಲ್ಲವೇ? ಅವನಿಗೇನು ಬೇಕು?"

ಆಚೆಯ ಕೋಣೆಯಲ್ಲಿದ್ದವರಿಗೆ ಕೇಳಿಸದಷ್ಟು ಸಾವಕಾಶವಾಗಿ ವಿಜಯೆ ನುಡಿದಳು, "ಒಂದು ಮೈಕ್ರೊಸ್ಕೋಪು ಮಾರಿ ಬರ್ಮಾಕ್ಕೆ ಹೋಗಲಿದ್ದಾರೆ. ಅದನ್ನೇ ತೋರಿಸುತ್ತಿದ್ದರು."

ವಿಲಾಸ ಸಿಟ್ಟಿನಿಂದ "ಮೈಕ್ರೋಸ್ಕೋಪ! ಮೋಸ ಮಾಡಲು ಇನ್ನಾರೂ ಸಿಗಲಿಲ್ಲವೆಂದು ಕಾಣುತ್ತಿದೆ" ಎಂದು ಗದ್ದರಿಸಿದ.

ರಾಸಬಿಹಾರಿಯು ತಿರಸ್ಕರಿಸುವ ದನಿಯಿಂದ ಮಗನನ್ನುದ್ದೇಶಿಸಿ ಇಂತಹ ಮಾತನ್ನೇಕೆ ಆಡುವಿ? ಅದರ ಉಪಯೋಗ ನಮಗೆ ಮಾತ್ರ ಗೊತ್ತಿಲ್ಲ. ಅದರಿಂದ ಲಾಭವಾದರೂ ಆಗ ಬಹುದು'' ಎಂದವನೇ ವಿಜಯೆಯತ್ತ ತುಸು ನಕ್ಕಂತೆ ಮಾಡಿ "ನಮಗೆ ಗೊತ್ತಿಲ್ಲದ ವಿಷಯದಲ್ಲಿ ಬಾಯಿ ಹಾಕುವುದು ತರವಲ್ಲವೆಂದು ನನ್ನ ಮತ. ವಿಲಾಸನ ಉದ್ದೇಶ ತಪ್ಪು ಎಂದಲ್ಲ—ಆದರೂ—ಮಗಳೇ ಇದಕ್ಕೆ ನಿನ್ನ ಅಭಿಪ್ರಾಯವೇನು?–ದುರಬೀನು ಆಗಿದ್ದರೆ ಒಂದು ವೇಳೆ ಅಡ್ಡಿಯಿರಲಿಲ್ಲ. ಸಮಯಾಸಮಯಗಳಲ್ಲಿ ಏನಾದರೂ ನೋಡಿಕೊಳ್ಳಬಹುದಾಗಿತ್ತು—ಏ ಯಾರೋ ಅಲ್ಲಿ? ದೀಪ ಹಚ್ಚಲಿಕ್ಕೆ ಆ ಕೋಣೆಯಲ್ಲಿ ಹೋಗುತ್ತೀಯಲ್ಲವೇ? ಅಲ್ಲಿ ಕುಳಿತ ರಾಯರಿಗೆ ನಾವು ಮಾಲನ್ನು ಕೊಳ್ಳುವದಿಲ್ಲವೆಂದೂ ತಾವು ಹೋಗಬಹುದೆಂದೂ ತಿಳಿಸಿಬಿಡು.''

"ನಾನು ಕೊಳ್ಳುತ್ತೇನೆಂದು ಅವರೊಡನೆ ಹೇಳಿರುವೆ" ವಿಜಯೆ ಅಂಜುತ್ತಂಜುತ್ತ ನುಡಿದಳು. ರಾಸಬಿಹಾರಿ ಚಕಿತನಾದ. "ಅದನ್ನೇಕೆ ಕೊಳ್ಳುವಿ? ಅದರ ಅವಶ್ಯಕತೆಯಾದರೂ ಏನು?''

ವಿಜಯೆ ಮಾತನಾಡಲಿಲ್ಲ.

"ಅವನು ಕೇಳುವ ಬೆಲೆ ಎಷ್ಟು?"

"ಎರಡು ನೂರು ರೂಪಾಯಿ"

ರಾಸಬಿಹಾರಿಯು ಹುಬ್ಬೇರಿಸಿ "ಇನ್ನೂರು? ಇದಕ್ಕೆ ಇನ್ನೂರು ರೂಪಾಯಿಯೇ, ವಿಲಾಸ, ನೀನು ಕಾಲೇಜಿನಲ್ಲಿರುವಾಗ ಇಂತಹ ಬಿಂಗಿನ

ಮಾಲನ್ನೆಷ್ಟೋ ನೋಡಿಬಿಟ್ಟಿರಬೇಕು. ಕಾಲಿಪದ ಹೋಗೋ? ಅವರಿಗೆ ಹೋಗಲಿಕ್ಕೆ ಹೇಳು, ಇಂತಹ ಬಾರಾಬಂಗಾಲಿ ಇಲ್ಲಿ ನಡೆಯುವಂತಿಲ್ಲ."

ಯಾರಿಗೆ ಈ ಮಾತನ್ನೆಲ್ಲ ಹೇಳುವದಿತ್ತೋ ಅವನೇ ಕಿವಿಯಾರೆ ಇದನ್ನೆಲ್ಲ ಕೇಳುತ್ತಿದ್ದ. ಕಾಲೀಪದನು ಆ ಕೋಣೆಗೆ ಹೋಗಲು ತಯಾರಾದದ್ದನ್ನು ನೋಡಿ, ವಿಜಯೆಯು ದೃಢಸ್ವರದಿಂದ "ದೀಪವಮಾತ್ರ ಹಚ್ಚಿ ಬಾ ಹೇಳುವದನ್ನೆಲ್ಲ ನಾನು ಹೇಳುವೆ."

ವಿಲಾಸನು ತನ್ನ ತಂದೆಗೆ ವ್ಯಂಗವಾಗಿ " ಅಪ್ಪಾ, ವ್ಯರ್ಥವಾಗಿ ಮರ್ಯಾದೆಯನ್ನೇಕೆ ತೆಗೆದುಕೊಳ್ಳುವಿ? ಅವರಿಗೆ ಇನ್ನೂ ನೋಡಿಕೊಳ್ಳುವದಿದೆಯೋ ಏನೋ ? " ಎಂದ.

ರಾಸಬಿಹಾರಿಯೇನೂ ಹೇಳಲಿಲ್ಲ. ವಿಜಯೆಗೆ ಮಾತ್ರ ಸಿಟ್ಟು ಬಂದಿತು. ವಿಲಾಸನು ಅದನ್ನು ಕಂಡುಹಿಡಿದು "ಅಪ್ಪಾ ನಾನು ಎಷ್ಟೋ ಮೈಕ್ರೊಸ್ಕೋಪುಗಳನ್ನು ನೋಡಿದ್ದೇನೆ. ಆದರೆ ಈರೀತಿ ಗಹಗಹಿಸಿ ನಗುವದನ್ನು ಮಾತ್ರ ಎಲ್ಲಿಯೂ ನೋಡಿರುವದಿಲ್ಲ " ಎಂದ.

ನಿನ್ನೆ ನರೇಂದ್ರ ಇಲ್ಲಿ ಊಟಮಾಡಿದ ಸಂಗತಿಯೂ ಆತನಿಗೆ ಗೊತ್ತಿತ್ತು. ಇಂದೂ ಈರೀತಿ ನಗುತ್ತಿರುವದನ್ನೂ ಆತ ಆಲಿಸಿದ್ದ. ಆಕೆಯ ವಸ್ತ್ರಆಭೂಷಣಗಳಲ್ಲಿ ಕಂಡು ಬರುವ ಓರಣ ಆತನಿಂದ ಮರೆಯಾಗಿರಲಿಲ್ಲ. ಈರ್ಷೆಯಿಂದ ಆತನಿಗೆ ಜ್ಞಾನಾಜ್ಞಾನದ ಪರಿವೆಯೇ ಉಳಿದಿರಲಿಲ್ಲ. ಆದರೆ ವಿಜಯೆ ಆತನನ್ನು ಲಕ್ಷಿಸಲಿಲ್ಲ. ಆಕೆ ರಾಸಬಿಹಾರಿಯೊಡನೆ "ನಿಮ್ಮ ಸ್ವಂತದ್ದೇನಾದರೂ ಮಾತನಾಡುವದಿದೆಯೇ ?" ಎಂದು ಕೇಳಿದಳು.

"ಮಾತಾಡುವದಿದೆ. ಆದರೆ ಅಷ್ಟೇನೂ ಅವಸರವಿಲ್ಲ," ನೀನ ಮಾತು ಕೊಟ್ಟಿದ್ದರಿಂದ ಕೊಳ್ಳುವದೇ ಯೋಗ್ಯವೆಂದು ನನಗನಿಸುತ್ತದೆ ಮಾತು ಹೆಚ್ಚೋ, ಇನ್ನೂರು ರೂಪಾಯಿ ಹೆಚ್ಚೋ? ಅದ್ದರಿಂದ ಅವರಿಗೆ ನಾಳೆ ಬಂದು ರೂಪಾಯಿ ತೆಗೆದುಕೊಂಡು ಹೋಗಲು ಹೇಳು."

"ನಾಳೆ ನಿಮ್ಮೊಡನೆ ಮಾತಾಡಿದರೆ ಆಗದೇ?" ವಿಜಯೆ ಆತನ ಪ್ರಶ್ನೆಗೆ ಉತ್ತರವನ್ನೇ ಕೊಡಲಿಲ್ಲ. ರಾಸಬಿಹಾರಿ ತುಸು ಅಪ್ರತಿಭನಾದ. "ಯಾಕೆ"

"ಆತನಿಗೆ ಕತ್ತಲಾಯಿತು. ಅಲ್ಲದೆ ಬಹುದೂರ ಹೋಗಬೇಕು. ಅವನೊಡನೆ ಇನ್ನೂ ತುಸು ಮಾತನಾಡುವದಿದೆ.

ವೃದ್ಧನು ಮನಸ್ಸಿನಲ್ಲಿಯೇ ಚಕಿತನಾದರೂ ತೋರಗೊಡಲಿಲ್ಲ. ಮಗ ನೆಡೆಗೆ ನೋಡಿದಾಗ ಆತನ ಕಣ್ಣಿಲ್ಲ ಆ ರಾತ್ರಿಯಲ್ಲಿ ಹಿಂಸ್ರಪಶುವಿನ ಕಣ್ಣಿನಂತೆ ಕಂಡುಬರುತ್ತಿತ್ತು, ಆತನಿಗೆ ಎನೋ ಹೇಳಬೇಕೆಂದು ತುಟಿ ಅದರುತ್ತಿತ್ತು. ರಾಸಬಿಹಾರಿಗೆ ಮಗನ ಒಲವು ತಿಳಿದು ರಾಸಬಿಹಾರಿಯು ನಗುತ್ತ ನುಡಿದ. "ಮಗಳೇ ಹಾಗೇಆಗಲಿ. ನಾವು ಈಗ ಹೋಗುವೆವು" ಎಂದವನೇ ಮಗನನ್ನು ಕರೆದುಕೊಂಡು ಹೊರಟುಬಿಟ್ಟ.

ಅಲ್ಲಿಯ ವರೆಗೂ ಆಕೆ ವಿಲಾಸನೆಡೆಗೆ ನೋಡಿರಲಿಲ್ಲ. ಆತನ ಇಂದಿನ ರೀತಿನೀತಿಯನ್ನು ನೋಡಿ ದಂಗಾಗಿ ನಿಂತುಬಿಟ್ಟಳು.

ತುಸು ಹೊತ್ತಿನ ನಂತರ ಆಕೆ ನರೇಂದ್ರನಿದ್ದ ಕೋಣೆಗೆ ಹೋದಳು. ಯಾವುದೋ ವಿಚಾರದಲ್ಲಿ ಮುಗ್ನನಾಗಿದ್ದ ಆತ ಎದ್ದುನಿಂತ. ನಾನು ಇದನ್ನು ನನ್ನ ಸಂಗಡಲೇ ಒಯ್ಯುತ್ತೇನೆ. ಆದರೆ ಇದರಿಂದ ನಿಮಗೆ ತುಂಬಾ ತೊಂದರೆಯಾಯಿತು. ಇಂದು ಬೆಳಗಿನಲ್ಲಿ ಯಾರ ಮೋರೆ ನೋಡಿ ಎದ್ದಿದ್ದೆನೋ ಕಾಣೆ. ನಾನೂ ನಿಮಗೆ ಅಪ್ರಿಯವಾದ ಮಾತುಗಳನ್ನಾಡಿದೆ. ಅವರಿಂದಲೂ ನೀವು ಆಡಿಸಿಕೊಳ್ಳಬೇಕಾಯಿತು."

"ನನಗೆ ಎಲ್ಲವೂ ಇಂತಹ ದಿನವಾಗಿ ಪರಿಣಮಿಸಲಿ. ನಿಮಗೆ ಎಲ್ಲ ವಿಷಯವೂ ವಿದಿತವಾಗಿದೆ. ಆದರೆ ಈ ಮಾತುಗಳನ್ನು ಆಡಲು ಅವರಿಗೆ ಯಾವ ಅಧಿಕಾರವೂ ಇರಲಿಲ್ಲ. ನಾಳೆ ಅವರಿಗೆ ತಿಳಿಸಿಕೊಡುತ್ತೇನೆ."

ಅತಿಥಿಗಾದ ಅವಮರ್ಯಾದೆಯಿಂದ ಆಕೆಯೆಷ್ಟು ನೊಂದಿರುವಳೆಂಬುದು ನರೇಂದ್ರನಿಗೆ ವಿದಿತವಾಯಿತು. ಆತ ಶಾಂತರೀತಿಯಿಂದ ಉತ್ತರಿಸಿದ "ಹಾಗೆಮಾಡುವ ಅವಶ್ಯಕತೆ ಇಲ್ಲ. ಈ ಯಂತ್ರಗಳ ವಿಷಯವಾಗಿ ಏನೂ ಗೊತ್ತಿರದ್ದರಿಂದ ಹಾಗೆ ಮಾತಾಡಿದರು. ನಿವೂ ಸಹ ಮೊದಲು ಅದೇ ತರದ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಿರಲ್ಲ! ಅವರು ನಿಮ್ಮ ಹಿತೈಷಿಗಳು, ಶುಭಾಕಾಂಕ್ಷಿಗಳು, ನನ್ನ ಸಲುವಾಗಿ ಅವರಿಗೆ ನೋವನ್ನುಂಟುಮಾಡಬೇಡಿ. ಈಗ ರಾತ್ರಿಯಾಯಿತು. ನಾನು ಹೋಗುತ್ತೇನೆ."

"ನಾಳೆ ಇಲ್ಲವೆ ನಾಡಿದು ಒಮ್ಮೆ ಬರುವಿರಾ?"

"ನಾಳೆ ಅಥವಾ ನಾಡದು? ಛೇ,— ಅವಧಿಯಿಲ್ಲ. ನಾನು ನಾಳೆ ಹೋಗಲಿದ್ದೇನೆ. ನಾಳೆ ಬರ್ಮಾಕ್ಕೆ ಹೋಗದಿದ್ದರೂ ಕಲಕತ್ತೆಗೆ ಹೋಗಿ ಕೆಲದಿನ ಉಳಿಯಬೇಕಾಗಿದೆ, ಅದಕ್ಕಾಗ—

ಆಕೆಯ ಕಣ್ಣಲ್ಲಿ ನೀರೂರಿತು. ಬಾಯಿಂದ ಶಬ್ದಗಳೇ ಹೊರಡಲಿಲ್ಲ. ನರೇಂದ್ರನೇ ನಕ್ಕು ಮಾತು ಮುಂದರಿಸಿದ. "ಇಷ್ಟೊಂದು ನಗಿಸಬಲ್ಲ ನೀವೇ ಸಿಟ್ಟಾದರೆ ಹೇಗೆ? ನಾನು ನಿಮಗೆ ಮಂದಬುದ್ಧಿಯವರೆಂದು ಕರೆದರೂ ಸಿಟ್ಟು ಮಾಡದ ನೀವು ಇದೇನು ನಡಿಸಿದ್ದೀರಿ; ನಿಮ್ಮನ್ನು ಎಂದೂ ಮರೆಯಲಾಲೆ."

ಗಾಳಿ ಬೀಸಿದೊಡನೆ ಜೋರಿನಿಂದ ಉದುರುವ ಮಳೆಯ ಹನಿಗಳಂತೆ ಕೊನೆಯಮಾತು ಕೇಳಿದೊಡನೆಯೇ ದಃಖ ಉಕ್ಕಿ ಬಂದು ಕಣ್ಣೀರು ಪಟಪಟ ಉದುರಿತು. ಆದರೆ ಎಲ್ಲಿಯಾದರೂ ಹೆರವರ ದೃಷ್ಟಿ ಬಿದ್ದೀತೆಂದು ಆಕೆ ಒರಸಿಕೊಂಡು, ನೀರವವಾಗಿ ನಿಂತಳು.

ನರೇಂದ್ರನೇ ಮಾತು ಮುಂದರಿಸಿದ. "ಇದೇನು ನೀವು ಅಳುತ್ತಿರುವಿರಿ?" ಎಂದು ಆಕೆಯ ಗದ್ದವನ್ನು ಹಿಡಿದು ಕೇಳಿದ.

ವಿದ್ಯುದ್ವೇಗದಿಂದ ಆಕೆ ಹಿಂದಕ್ಕೆಸರಿದು ಕೈಬಿಡಿಸಿಕೊಂಡಳು ನರೇಂದ್ರನಿಗೆ ಇದೇನಾಯಿತೆಂದೇ ತಿಳಿಯಲಿಲ್ಲ. ಅವನಿಗೆ ಪಾಪ! ಜೀವಾಣುಶಾಸ್ತ್ರ ಮಾತ್ರ ಗೊತ್ತಿದ್ದುದು. ಕೊನೆಗೊಮ್ಮೆ ಅವಸರದಿಂದ ಬೇಗನ್ನು ಹಿಡಿದುಕೊಂಡೊಡನೆಯೇ ಆಕೆ ಗದ್ಗದಕಂಠದಿಂದ "ಅದು ನನ್ನದು, ಅಲ್ಲಿಯೇ ಇಡಿರಿ" ಎಂದಳು. ಆದರೆ ಅಳು ತಡೆಯಲಾರದುದರಿಂದ ಹೊರಗೆ ಹೋಗಿಬಿಟ್ಟಳು.

ನರೇಂದ್ರನಿಗೆ ಏನು ಮಾಡಬೇಕೆಂದು ತೋಚದೆ ಎರಡು ಮೂರು ನಿಮಿಷಗಳವರೆಗೆ ಸುಮ್ಮನೆ ನಿಂತ. ಆಮೇಲೆ ಹೊರಗೆ ಬಂದು ನೋಡಿದ. ಆದರೆ ಯಾರೂ ಇರಲಿಲ್ಲ. ಕೆಲಹೊತ್ತು ಹಾದೀನೋಡಿ ಬರಿಗೈಯಿಂದ ಆ ಕತ್ತಲಲ್ಲೇ ಹೊರಟುಹೊದ.

ವಿಜಯೆ ತಿರುಗಿ ಬಂದು ನೋಡಿದಾಗ ಬೇಗು ಇತ್ತು. ಆದರೆ ಅದರ ಒಡೆಯನಿರಲಿಲ್ಲ. ಆಕೆ ಹಣ ತರಲು ಕೋಣೆಯೊಳಗೆ ಹೋಗಿದ್ದಳು. ಆದರೆ ಹಾಸಿಗೆಯಲ್ಲಿ ಮುಖವನ್ನಡಗಿಸಿ ಅಳುವದರಲ್ಲಿ ಎಷ್ಟೋ ಹೊತ್ತು ಕಳೆದಳು. ಆಳಿಗೆ ಕರೆಯಲು ಕಾಲೀಪದ ಬಂದ. ಆದರೆ "ನಾನು ಒಳಗಿದ್ದೆ. ರಾಯರು ಯಾವಾಗ ಹೋದರೆಂಬುದನ್ನು ಅರಿಯೆ" ಎಂದುಬಿಟ್ಟ. ಬಾಗಿಲು ಕಾಯುವವನೂ ಅದೇ ಅರ್ಥದ ಮಾತನ್ನಾಡಿದ.

೧೩

ಬ್ರಾಹ್ಮಮಂದಿರದ ಸ್ಥಾಪನೆಯ ಶುಭದಿನ ಸನ್ನಿಹಿತವಾಯಿತು. ಅತಿಥಿಗಳೆಲ್ಲ ಒಬ್ಬೊಬ್ಬರಾಗಿ ಬರಹತ್ತಿದರು. ಬರೀ ಕಲಕತ್ತೆಯಿಂದಷ್ಟೇ ಅಲ್ಲ; ಸುತ್ತು ಮುತ್ತಲಿನ ಹಳ್ಳಿಯಿಂದಲೂ ಸಹ ನಾಲ್ಕಾರು ಮಂದಿ ಸಪತ್ನಿಕರಾಗಿ ಬಂದು ನೆರೆದರು. ಇಂದು ಸಾಯಂಕಾಲ ರಾಸಬಿಹಾರಿಯು ಅವರಿಗೆಲ್ಲ ಔತಣ ಕೊಟ್ಟಿದ್ದ.

ಸ್ವಾರ್ಥವು ಎಷ್ಟೋ ಮಂದಿಯನ್ನು ಚಾಣಾಕ್ಯರನ್ನಾಗಿ ಮಾಡಿದೆ. ಈ ಕೆಳಗಿನ ಘಟನೆ ಅದಕ್ಕೊಂದು ನಿದರ್ಶನ.

ಆಮಂತ್ರಿತ ಅಭ್ಯಾಗತರ ನೆರವಿಯ ಮಧ್ಯದಲ್ಲಿ ರಾಸಬಿಹಾರಿಯು ಕುಳಿತು ತನ್ನ ನರೆತ ಗಡ್ಡದ ಮೇಲೆ ಕೈಯಾಡಿಸುತ್ತ, ಕಣ್ಣನ್ನು ಅರ್ಧ ಮುಚ್ಚಿದಂತೆ ಮಾಡಿ ಪರಲೋಕಗತನಾದ ವನವೀರನ ವಿಷಯವಾಗಿ ಗಂಭೀರವಾಗಿ ಹೇಳಹತ್ತಿದ. "ದೇವರು ಅವನನ್ನು ಅಕಾಲದಲ್ಲಿಯೇ ಬರ ಮಾಡಿಕೊಂಡನು. ದೇವರ ಇಚ್ಛೆಯ ವಿರುದ್ಧ ನಮ್ಮದೇನು ನಡೆದೀತು. ಆದರೆ ನಮ್ಮನ್ನೆಲ್ಲ ನಡುನೀರಿನಲ್ಲಿ ಕೈಬಿಟ್ಟು ಹೋದ. ಅವನೆಡೆಗೆ ಹೋಗುವ ದಿನ ನಮಗೆ ಹತ್ತಿರವಾಗುತ್ತ ಬಂದಿದೆ. ಆದಷ್ಟು ಬೇಗನೇ ಕಣ್ಣುಮುಚ್ಚು ವಂತಾಗಲೆಂಬುದೇ ನಿರಾಕಾರ ಪರಬ್ರಹ್ಮನಲ್ಲಿ ನನ್ನ ಸವಿನಯ ಪ್ರಾರ್ಥನೆ." ಎಂದವನೇ ಧೋತರದ ಚುಂಗಿನಿಂದ ಕಣ್ಣನ್ನೊರಸಿಕೊಂಡ. ಆ ಮೇಲೆ ಸುಸು ಹೊತ್ತು ಆತ್ಮಸಮಾಧಿಯಲ್ಲಿ ಕುಳಿತವನಂತೆ ಕುಳಿತು ತನ್ನ ಬಾಲ್ಯ ಕಾಲದ ಕತೆಯನ್ನು ಹೇಳಿ, ಸತ್ಯಧರ್ಮ ಸ್ವೀಕರಿಸಿದ ವಿಷಯವನ್ನು ತಿಳಿಸಿ ನಂತರ ಹೀಗೆಯೇ ಮುಂದುವರಿಸಿದ. "ಆದರೆ ವನವೀರನ ಕೋಮಲ ಹೃದಯವು ಹಳ್ಳಿಯ ಜನರ ಅತ್ಯಾಚಾರವನ್ನು ಸಹಿಸಲು ಸಮರ್ಥವಾಗ ಲಿಲ್ಲ. ಅದರಿಂದ ಆತ ಕಲಕತ್ತೆಗೆ ಹೊರಟ. ಆದರೆ ನಾನು ಮಾತ್ರ 'ಬಂದ ದ್ದೆಲ್ಲ ಬರಲಿ' ಎಂದು ಈ ಹಳ್ಳಿಯಲ್ಲಿಯೇ ವಾಸಿಸಿದೆ. ನನ್ನ ಯಾತನೆ ಹೇಳತೀ ರದು. ಆದರೂ ಸತ್ಯಕ್ಕೆ ಜಯವಾಗಲೇ ಬೇಕೆಂದು ಮನಸ್ಸು ಹೇಳುತ್ತಿತ್ತು. ಅದರಿಂದ ಇಷ್ಟೊಂದು ದಿನಗಳ ನಂತರ, ತಮ್ಮೆಲ್ಲರ ಪಾದಧೂಲಿಯಿಂದ ಈ ಮನೆಯು ಪವಿತ್ರವಾಯಿತು. ಈಗ ವನವೀರ ಇಲ್ಲ. ಅವರು ಸ್ವರ್ಗ ದಲ್ಲಿ ಕುಳಿತು ಇಲ್ಲಿಯ ಕೃತ್ಯವನ್ನು ನೋಡಿ ಸಂತೋಷಪಡುತ್ತಿದ್ದಾರೆಂದೇ ನಾನು ಭಾವಿಸುತ್ತೇನೆ." ಹೀಗೆ ಹೇಳಿ ಆತ ಮತ್ತೆ ಕಣ್ಣು ಮುಚ್ಚಿ ಕುಳಿತ.

ಬಂದವರೆಲ್ಲ ಹರ್ಷ ಲಹರಿಯಲ್ಲಿ ಓಲಾಡುತ್ತಿದ್ದರು. ವಿಜಯೆಯ ಎರಡೂ ಕಣ್ಣುಗಳಿಂದ ಆನಂದಾಶ್ರುಗಳುರುಳಿದವು. ರಾಸಬಿಹಾರಿಯು ಕಣ್ಣೊರಸಿ ತನ್ನ ಬಲಗೈಯನ್ನು ಮುಂದೆ ಮಾಡಿ "ಅವರ ಏಕಮಾತ್ರ ಪುತ್ರಿ ಈಕೆ. ತಂದೆಯ ಎಲ್ಲ ಗುಣಗಳೂ ಈಕೆಯಲ್ಲಿ ಮನೆಮಾಡಿವೆ. ಕರ್ತವ್ಯ ಪಾಲನದಲ್ಲಿ ದೃಢಳು. ಸತ್ಯ ಹೇಳುವುದಕ್ಕೆ ಹಿಂದು ಮುಂದು ನೋಡುವವ ಳಲ್ಲ. ಈತ ನನ್ನ ಮಗ ವಿಲಾಸ. ಅವಳಂತೆಯೇ ಈತನೂ ಸದ್ಗುಣಗಳ ಖಣಿ. ಇವರು ಒಂದಾಗಿ ಬಾಳುವ ದಿನ ಕಾಣಲು ಮನಸು ಹಾತೊರೆಯು ತ್ತಿದೆ. ತಮ್ಮೆಲ್ಲರ ಆಗಮನದಿಂದ ಆ ದಿನವು ಇನ್ನಷ್ಟು ಹತ್ತಿರದ್ದಾಗಿದೆ.

ನೆರೆದ ನೆರವಿಯಲ್ಲಿ ಸಂತೋಷದ ತೆರೆಯೆದ್ದಿತು. ವಿಜಯೆಯ ಹತ್ತಿರ ಕುಳಿತ ಹೆಂಗಸರುಆಕೆಯ ಕೈಯ್ಯನ್ನು ಹಿಡಿದು ಮೃದುವಾಗಿ ಒತ್ತಿದರು. ರಾಸಬಿಹಾರಿಯು ಉದ್ದವಾದ ನೀಳವಾದ ಉಸಿರೆಳೆದು "ಇವರೊಬ್ಬರೇ ಅವರ ಸಂತಾನ. ಈ ಶುಭದಿನ ನೋಡಿಯೇ ಹೋಗಬೇಕೆಂಬ ಬಯಕೆ ಅವರಲ್ಲಿ ವಿಶೇಷವಾಗಿತ್ತು. ಅದನ್ನು ಮುಂದೂಡಿದ ಅಪರಾಧ ನನ್ನದು. ಇದಕ್ಕೆಲ್ಲ ನಾನೇ ಹೊಣೆಗಾರ. ಮಾನವ ಜೀವನವೆಂಬುದು ಕಮಲದೆಲೆಯ ಮೇಲಿನ ನೀರಿನಂತೆ. ಅದನ್ನು ನಾವು ಬರೀ ಬಾಯಿಂದ ಅನ್ನುತ್ತೇವೆ. ಆದರೆ ಕೃತಿಯಲ್ಲಿ ತೋರಿಸುವವರು ವಿರಳ. ಆತ ಇಷ್ಟು ಮೊದಲೇ ಪರ ಲೋಕವಾಸಿಯಾಗಬಹುದೆಂದು ನಾನು ಭಾವಿಸಿರಲಿಲ್ಲ."

ಹೀಗೆ ಹೇಳಿ ಒಂದು ಕ್ಷಣಹೊತ್ತು ನೀರವಾಗಿ ಕುಳಿತ. ಆದರೆ ದ್ರವಿತ ಹೃದಯದ ಚಿತ್ರ ಆ ದೀಪದ ಬೆಳಕಿನಲ್ಲಿ ಆತನ ಮೋರೆಯಲ್ಲಿ ಅಂಕಿತ ವಾದದ್ದು ಕಾಣುತ್ತಿತ್ತು. ಮತ್ತೊಂದು ನಿಟ್ಟುಸಿರೆಳೆದು ಆತ ಶಾಂತ ಹಾಗೂ ಗಂಭೀರನಾಗಿ ನುಡಿದ. "ಅದರಿಂದ ನನಗೀಗ ನನ್ನ ದೇಹದ ಕಾಳಜಿ ಯಾಗಿದೆ. ಬರುವ ಫಾಲ್ಗುಣದ ವರೆಗಾದರೂ ಬದುಕುವೆನೋ ಹೇಳಲಾರೆ. ಅದಕ್ಕಾಗಿ ತನ್ನ ಸರ್ವಸ್ವವನ್ನೆಲ್ಲ ಅರ್ಪಿಸಿ ಹೋದ ವನವೀರನು ತನ್ನ ಮಗಳನ್ನೂ ಅರ್ಪಿಸಿ ಹೋಗಿದ್ದಾನೆ. ಅದಕ್ಕಾಗಿ ಧರ್ಮ ಬುದ್ಧಿಯಿಂದ ನನ್ನ ಕರ್ತವ್ಯವನ್ನು ನಾನು ಮಾಡಲೇ ಬೇಕಾಗಿದೆ. ತಮ್ಮೆಲ್ಲರ ಆಶೀರ್ವಾದ ದಿಂದ ಇಬ್ಬರೂ ದೀರ್ಘ ಜೀವಿಗಳಾಗಿ ಸತ್ಯ ಧರ್ಮದಂತೆ ಕರ್ತವ್ಯಪಾಲನೆ ಮಾಡಲಿ, ಇವಳ ತಂದೆ ಯಾವ ಸ್ಥಳದಿಂದ ಜನತೆಯ ಅಪವಾದಕ್ಕಾಗಿ

ದೂರ ಹೋಗಬೇಕಾಗಿದ್ದಿತೋ, ಅದೇ ಜಾಗೆಯಲ್ಲಿ ಈ ಮಂದಿರದ ಪ್ರತಿಷ್ಠೆಯಾಗಿ ಸತ್ಯ ಧರ್ಮದ ಪ್ರಚಾರವಾಗಬೇಕೆಂಬುದೇ ನನ್ನ ಹಂಬಲು.''

ವೃದ್ಧ ಆಚಾರ್ಯ ದಯಾಲ ಚಂದ್ರನು ಆಶೀರ್ವದಿಸಿದನು.

ರಾಸಬಿಹಾರಿಯು ಆಗ ವಿಜಯೆಯನ್ನು ಕರೆದು ''ಮಗಳೇ ನಿಮಗೆ ತಂದೆಯಿಲ್ಲ. ನಿಮ್ಮ ತಾಯಿಯೂ ಸಹ ಮೊದಲೇ ಸ್ವರ್ಗವಾಸಿಯಾಗಿದ್ದಾಳೆ. ಇಲ್ಲವಾದರೆ ಈ ಮಾತು ನಿಮ್ಮೊಡನೆ ಕೇಳುವ ಪ್ರಸಂಗ ಬರುತ್ತಿರಲಿಲ್ಲ. ನಾಚಿಕೆ ಪಡಬೇಡ, ಮಗೂ, ಈ ಎಲ್ಲ ಪೂಜ್ಯ ಅತಿಥಿಗಳಿಗೆ ಬರುವ ಫಾಲ್ಗುಣದಲ್ಲಿ ಇನ್ನೊಮ್ಮೆ ಇಲ್ಲಿಗೆ ಬರಲು ಈಗಲೇ ಆಮಂತ್ರಿಸಲೇ? ಹೇಳು'' ಎಂದನು.

ಪಾಪ! ವಿಜಯೆ ಏನು ಹೇಳಲಾಪಳು? ಕ್ಷೋಭ, ಭಯ ವಿರಕ್ತಿಯಿಂದ ಆಕೆಯ ಕುತ್ತಿಗೆ ಕಟ್ಟಿಬಂದಿತು. ಆಕೆ ತಲೆ ಬಾಗಿಸಿ ನೀರವವಾಗಿ ಕುಳಿತಳು. ರಾಸಬಿಹಾರಿಯು ತುಸು ಹೊತ್ತು ತಡೆದು ಮೃದುವಾಗಿ ನಕ್ಕು ಮಗಳೇ ದೀರ್ಘಾಯುಷಿಯಾಗು. ನೀನೇನೂ ಹೇಳುವುದು ಬೇಡ.—ನಮಗೆಲ್ಲ ವಿದಿತವಾಯಿತು'' ಎಂದನು.

ಆ ಮೇಲೆ ಎದ್ದು ಕೈಜೋಡಿಸಿ ''ಬರುವ ಫಾಲ್ಗುಣದಲ್ಲಿ ತಮ್ಮೆಲ್ಲರ ಪಾದಧೂಲಿಯು ಮತ್ತೊಮ್ಮೆ ಈ ಸ್ಥಾನಕ್ಕೆ ತಲಗಬೇಕೆಂದು ಕೇಳಿಕೊಳ್ಳುತ್ತೇನೆ'' ಎಂದನು. ಎಲ್ಲರೂ ಸಮ್ಮತಿಸಿದರು. ವಿಜಯೆಗೆ ''ತಂದೆ ತೀರಿದ ವರ್ಷದೊಳಗಾಗಿ –'' ಎಂದವಳೇ ಕುತ್ತಿಗೆಯುಬ್ಬಿ ಬಂದುದರಿಂದ ಸುಮ್ಮನಾದಳು.

ರಾಸಬಿಹಾರಿಯು ಸಂದರ್ಭವನ್ನು ಊಹಿಸಿ ಪಶ್ಚಾತ್ತಾಪ ಪಟ್ಟವನಂತೆ 'ಮಗೂ, ನಿನ್ನ ಹೇಳಿಕೆ ಸರಿಯಾಗಿದೆ. ಇದರ ಎಚ್ಚರವೇ ನನಗಿರಲಿಲ್ಲ.''

ವಿಜಯೆ ಕಣ್ಣೊರಸಿಕೊಂಡಳು. ಇದನ್ನೂ ರಾಸಬಿಹಾರಿ ನೋಡಿದ. ಆತನೂ ನಿಟ್ಟುಸಿರಿಟ್ಟು ''ಇವೆಲ್ಲ ಅದೇ ಪರಮಾತ್ಮನ ಇಚ್ಛೆ. ಬರುವ ವೈಶಾಖದಲ್ಲಿಯೇ ಈ ಕಾರ್ಯ ನೆರವೇರಲಿ. ಮಗೂ, ವಿಲಾಸ, ರಾತ್ರಿಯಾಗುತ್ತ ಬಂದಿತು. ನಾಳೆಯಂತೂ ತೆರಪಿಲ್ಲದಷ್ಟು ಕೆಲಸ. ಅಡಿಗೆ ಸಿದ್ಧತೆ ಆಳಿನ ಮೇಲೆಯೇ ಬಿಡುವುದು ಯೋಗ್ಯವಲ್ಲ. ನೀನೂ ನಡೆ. ನಾನೂ ಬಂದೆ.

ನನಗೀಗ ಅಪ್ಪಣೆ ದಯಪಾಲಿಸಿರಿ" ಎಂದವನೇ ಮಗನ ಹಿಂದೆಯೇ ಮನೆಯೊಳಗೆ ಹೊಕ್ಕ.

ಸಕಾಲದಲ್ಲಿ ಪ್ರೀತಿ ಭೋಜನವಾಯಿತು. ವ್ಯವಸ್ಥೆ ಸರಿಯಾಗಿತ್ತು. ಯಾವುದಕ್ಕೂ ಕೊರತೆ ಇರಲಿಲ್ಲ. ಸುಮಾರು ಹನ್ನೆರಡು ಘಂಟೆಯಾಗಿರಬಹುದು. ವಿಜಯೆಯೊಬ್ಬಳೇ ಒಂದು ಕಂಬದ ಮರೆಗೆ ನಿಂತಿದ್ದಳು. ರಾಸಬಿಹಾರಿಗೆ ಒಂದು ಮಾತು ನೆನಪಾಯಿತು. ಆಕೆಯಿದ್ದಲ್ಲಿ ಬಂದು "ಮಗಳೇ, ನಿಮಗೊಂದು ಸಂಗತಿ ಹೇಳಬೇಕಾಗಿತ್ತು. ಮರೆತೇ ಬಿಟ್ಟೆ. ಆ ಮೈಕ್ರೋಸ್ಕೋಪದ ಬೆಲೆ ಅವನಿಗೆ ಕೊಟ್ಟಿರುವೆ" ಎಂದನು.

೮-೧೦ ದಿನವಾಯಿತು. ಮೈಕ್ರೋಸ್ಕೋಪ ಇಟ್ಟು ಹೋದ ನರೇಂದ್ರ ತಿರುಗಿ ಕಾಲು ಹಾಕಲೇ ಇಲ್ಲ. ಈ ೭-೮ ದಿನ ಆಕೆ ಹೇಗೆ ಕಳೆದಳೆಂಬುದು ಅವಳೊಬ್ಬಳಿಗೇ ಗೊತ್ತು. ಅವನ ಅಜ್ಜಿಯ ಮನೆ ೨ ಹರದಾರಿ ದೂರದಲ್ಲಿದೆ ಎಂಬ ಮಾತಷ್ಟೇಗೊತ್ತು; ಹೋದಾಗ ಎಲ್ಲಿ, ಯಾವ ದಿಕ್ಕಿಗೆ ಎಂಬುದಾವುದೂ ಗೊತ್ತಿರಲಿಲ್ಲ. ಈಗ ರಾಸಬಿಹಾರಿಯ ಈ ಮಾತಿನಿಂದ ಚಕಿತಳಾಗಿ " ಎಂದು ಕೊಟ್ಟಿರಿ ? " ಎಂದು ಕೇಳಿದಳು.

" ಸರಿಯಾಗಿ ನೆನಪಿಲ್ಲ. ಆದರೂ ಅದರ ಮೂರನೇ ದಿನವೇ ಇರಬೇಕು. ಆ ಮಾಲು ಎಂತಹದೇ ಇರಲಿ. ಮಾತು ಕೊಟ್ಟಾಗಿತ್ತು. ನೀನು ಕೊಡುವದೇನು ? ನಾನು ಕೊಡುವದೇನು ? ಎಲ್ಲ ಒಂದೇ. ತಿಂದರೂ ಹೊರಗಿನವನೇನು ತಿನ್ನುವಂತಿಲ್ಲ. ಪಾಪ ಪುಣ್ಯ ಅವನ ಪಾಲಿಗೆ. ಬರ್ಮಾಕ್ಕೆ ಹೋಗಿ ಎಲ್ಲಿಯಾದರೂ ಜೀವಿಸಿರಲಿ ಎಂದು ಕೊಟ್ಟು ಬಿಟ್ಟೆ "

" ಎಲ್ಲಿ ಕೊಟ್ಟಿರಿ ? "

" ಯಾಕೆ ? ಆತನೇನು ಎರಡು ಸಲ ಒಯ್ದನೇ ? ಮೋರೆ ನೋಡಿದರೆ ಹಾಗೆ ಕಾಣಲಿಲ್ಲ. ಆಗಲಿ, ದಂತ ತೆತ್ತುತೆತ್ತೇ ಈ ಗಡ್ಡ ಹಣ್ಣಾಯಿತು. ಕಾಳಜಿಮಾಡಬೇಡ, ನಾನೇ ಸಹಿಸುತ್ತೇನೆ. ಹೋಗಲಿ"

"ಕಾಕಾಜೀ, ನೀವೇಕೆ ಗಡಿಬಿಡಿ ಮಾಡುತ್ತೀರಿ. ಅವನು ಅಂತಹ ಮನುಷ್ಯನಲ್ಲ. ಹೊಟ್ಟೆಗಿಲ್ಲದೆ ಸತ್ತರೂ ಸಾಯಬಹುದು? ಮಾನವನ್ನು ಮಾತ್ರ ಮಾರಲಾರ. ಎಲ್ಲಿ ಭೆಟ್ಟಿಯಾಯಿತು? ಎಂದು ಕೊಟ್ಟಿರಿ."

"ಆಗಲಪ್ಪ ಆಗಲಿ. ಹೋದ ಜೀವ ಬಂದಂತಾಯಿತು. ಗಂಟು ಕಡಿಮೆಯಲ್ಲ. ಇನ್ನೂರು ರೂಪಾಯಿ! ಆತ ಹೋಗಲಿಕ್ಕೆ ಬಹಳೇ ಆತುರನಿದ್ದ." ಎಂದವನೇ ತುಸು ತಡೆದು ಏನೋ ಕಂಡವನಂತೆ "ಯಾರು? ವಿಲಾಸ? ಪಾಲಕಿಯ ವ್ಯವಸ್ಥೆಯಾಯೀತೇ? ಥಂಡಿಯಾಗಹತ್ತಿದೆ. ಮಾಡಿದರೆ ನಾನೇ ಮಾಡಬೇಕು. ಇಲ್ಲವಾದರೆ ಆಗುವಂತೆಯೇ ಇಲ್ಲ." ಎಂದು ಸಿಟ್ಟು ಮಾಡಿದವರಂತೆ ಹಾದಿಯಲ್ಲಿದ್ದ ಒಂದು ಕಂಬವನ್ನೇ ವಿಲಾಸನೆಂದು ಭಾವಿಸಿ ಅದೇ ದಿಕ್ಕಿಗೆ ಹೊರಟುಹೋದ.

೧೪

ಒಮ್ಮೆ ವಿಲಾಸನಿಗೆ ಆತ್ಮಸಮರ್ಪಣ ಮಾಡಬಹುದಾದ ದಿನ ಒಂದಿತ್ತು. ಆದರೆ ಈಪೊತ್ತು ವಿಲಾಸನೇ ಏಕೆ— ಜಗತ್ತಿನಲ್ಲಿ ಒಬ್ಬನೇಒಬ್ಬನನ್ನುಳಿದು ಇನ್ನಾರನ್ನೂ ಬಯಸುವಂತಿಲ್ಲ. ರಾಸಬಿಹಾರಿಯ ಮನೆಯಿಂದ ಬರುವಾಗ ಹಾದಿಯಲ್ಲೆಲ್ಲ ಇದೇ ವಿಚಾರ ಆಕೆಗೆ.

ಈ ವಿಷಯದಲ್ಲಿ ತಂದೆಯ ಅಭಿಪ್ರಾಯವೇನಿತ್ತು ಎಂಬುದನ್ನು ಅರಿಯಲು ಅವಕಾಶವಿರಲಿಲ್ಲ. ತಂದೆ ತೀರಿದ ನಂತರ ವಿಲಾಸನೇ ಆಕೆಯ ಜೀವನ ಸರ್ವಸ್ವವೆಂಬುದರಲ್ಲಿ ಭಿನ್ನಾಭಿಪ್ರಾಯವಿರಲಿಲ್ಲ. ಇದಕ್ಕೆ ಅಡ್ಡಿಯಾದೀತೆಂದು ಆಕೆ ಊಹಿಸಿರಲಿಲ್ಲ.

ಆದರೆ ಈ ಅನಾಸಕ್ತ ವ್ಯಕ್ತಿ ಎಂಲ್ಲಿಂದ ಬಂದು ಎತ್ತ ಹೋದನೋ ತಿಳಿಯದು. ಆದರೂ ಹೃದಯದಲ್ಲಿ ಅಲ್ಲೋಲ ಕಲ್ಲೋಲವನ್ನುಂಟುಮಾಡಿ ಹೋದ. ಆತನೊಡನೆ ಕೂಡುವದು ಸಾಧ್ಯವೇ? ಇಲ್ಲವೆ ಇದೊಂದು ಸ್ವಪ್ನವೇ? ಎಂಬುದು ಈಗಿನ ಸಮಸ್ಯೆ.

ಮನೆಗೆ ಬಂದು ಒರಗಿದ್ದೇನೋ ನಿಜ. ಆದರೆ ನಿದ್ದೆ ಮಾತ್ರ ಹತ್ತಲಿಲ್ಲ. ಆಕೆಗೆ ತಾಯಿ ಇಲ್ಲ. ತಂದೆ ಇಲ್ಲ. ಅಣ್ಣ ತಮ್ಮಂದಿರೆನ್ನುವವರಂತೂ ಇರಲೇ ಇಲ್ಲ. ತನ್ನವರೆನ್ನುವವರು ರಾಸಬಿಹಾರಿಯ ಹೊರತು ಇನ್ನಾರಿಲ್ಲ. ಸರ್ವಸ್ವವೂ ಆತನೇ. ತನ್ನನ್ನು ಕಲಕತ್ತೆಯಿಂದ ಈ ಹಳ್ಳಿಗೆ ತಂದ ಉದ್ದೇಶವಾವುದೆಂದು ಈಗ ಆಕೆಗೆ ಹೊಳೆಯಹತ್ತಿತು. ನರೇಂದ್ರನು ಬೇಡದಿದ್ದರೂ ಹಣಕೊಟ್ಟದ್ದು. ನಿನ್ನೆ ತನ್ನ ಮನೆಯಲ್ಲಿ ಮಹನೀಯರಿಗೆ ಆಮಂತ್ರಿಸಿ

ಮದುವೆ ಪ್ರಸ್ತಾಪ ಮಾಡಿದ್ದು,—ಇವೆಲ್ಲವುಗಳ ಉದ್ದೇಶ ಆಕೆಗೆ ನಿಚ್ಚಳ ವೆನಿಸಹತ್ತಿತು.

ಆದರೆ ಆತನ ನಡತೆಯಲ್ಲಿ ಅತ್ಯಾಚಾರ ಬಲಾತ್ಕಾರಗಳ ಲವಲೇಶ ವಿದ್ದಿಲ್ಲ. ಆದರೆ ಏನೋ ಹೊಂಚು ನಡೆಸಿದ್ದಾನೆಂಬುದೂ, ಈ ಸ್ಥಿತಿಯಲ್ಲಿ ತಾನು ಅಸಹಾಯಳಿದ್ದೇನೆಂಬುದೂ ಆಕೆಗೆ ಗೊತ್ತು. ಹೀಗಾಗಿ ಇಡೀ ರಾತ್ರಿ ಕಣ್ಣಿಗೆ ಕಣ್ಣು ಹಚ್ಚಲಿಲ್ಲ. ಆಕೆ ತಂದೆಯನ್ನು ನೆನಸಿ " ತಂದೆಯೇ, ನಿನಗೆ ಗೊತ್ತಿದ್ದೂ ಇಂತಹರ ಕೈಯಲ್ಲಿ ನನ್ನನ್ನೇಕೆ ಅರ್ಪಿಸಿದೆ?" ಎಂದು ಅತ್ತಳು.

ವಿಲಾಸನೊಡನೆ ಕೂಡಿ ನರೇಂದ್ರನ ನಾಶಮಾಡಬೇಕೆಂಬ ವಿಚಾರವು ಆಕೆಯಲ್ಲೂ ಇತ್ತು. ಆದರೆ ಇಂದು ಅದೇ ವ್ಯಕ್ತಿಯನ್ನು ಹೊಂದಲು, ಮಧ್ಯ ದಲ್ಲಿರುವ ಆತಂಕಗಳಿಂದ ಮನ ನೊಂದಿತ್ತು.

ಮರುದಿನ ಪರೇಶನ ತಾಯಿ ಕೂಗಿದ್ದರಿಂದ ಎಚ್ಚತ್ತಳು. ಆಗಲೇ ಹೊತ್ತೇರಿತ್ತು. ಹೊರಗೆ ಈಕೆಯೊಬ್ಬಳನ್ನುಳಿದು ಇತರ ಆಮಂತ್ರಿತರೆಲ್ಲ ನೆರೆದಿದ್ದರು. ಅದಕ್ಕಾಗಿ ಲಗುಬಗೆಯಿಂದ ಅಲಂಕೃತಳಾದಳು. ಕೆಲಹೊತ್ತಿನ ಲ್ಲಿಯೇ ಇನ್ನೊಂದು ಕರೆ ಬಂದಿತು. ಕಾಲೀಪದನು " ಅಮ್ಮಾ ಬೇಗ ಬನ್ನಿ, ಚಿಕ್ಕ ರಾಯರು ಇನ್ನೂ ಬರಲಿಲ್ಲವೆಂದು ರೇಗಿಗೆದ್ದಿದ್ದಾರೆ."

ಮದ್ದಿನ ಕಾರಖಾನೆಯಲ್ಲಿ ಬೆಂಕಿಯ ಕಿಡಿ ಅನರ್ಥವನ್ನುಂಟು ಮಾಡುವಂತೆ ಆಳಿನ ಮಾತಿನಿಂದ ಆಕೆಗೆ ಸಿಟ್ಟು ಬಂದಿತು. ಆದರೂ ಆಕೆ ಮಾತಾಡಲಿಲ್ಲ. ಸ್ಫಟಿಕದ ತುಂಡು ಬಿಸಿಲಿನಿಂದ ತಪ್ತವಾಗಿ ಕಿರಣ ಚಲ್ಲು ವಂತೆ ಆಕೆಯ ಕಣ್ಣು ಕಿಡಿಕಾರಹತ್ತಿತು. ಅದನ್ನು ಕಡು ಕಾಲೀಪದ ಗಾಬರಿ ಯಾದ. ಆತ ಇನ್ನೂ ಹೇಳಲು ಬಯಸುತ್ತಿದ್ದ. ಅಷ್ಟರಲ್ಲಿಯೇ " ವಿಜಯೆ ಕೆಳಗೆ ಹೋಗು ಎಂದು ಆಜ್ಞಾಪಿಸಿದಳು.

ಈ ಮನೆಯಲ್ಲಿ ವಿಲಾಸನಿಗೆ ಚಿಕ್ಕರಾಯರೆಂದೂ ರಾಸಬಿಹಾರಿಗೆ ದೊಡ್ಡ ರಾಯರೆಂದೂ ಕರೆಯುವ ವಾಡಿಕೆ. ತನ್ನ ನೌಕರರ ಮೇಲೂ ಅವರ ಪ್ರಭಾವ ಈ ರೀತಿಯಾಗಿದೆಯೆಂದು ಇಂದೇ ತಿಳಿದುದು. ಆತನಿತ್ತ ಕೂಳಿ ನಿಂದ ಬದುಕುವ ಆಶ್ರಿತಳು ತಾನಾದೆನೆ?" ಎಂದು ಯೋಚಿಸಿದಳು.

ಅರ್ಧ ತಾಸಿನಲ್ಲಿ ಕೈಕಾಲು ಮೋರೆ ತೊಳೆದು ಸನ್ನದ್ಧಳಾಗಿ ಕೆಳಗೆ ಬಂದಳು. ಆಗ ಅತಿಥಿಗಳೆಲ್ಲ ಚಹಾ ಕುಡಿಯುತ್ತಿದ್ದರು. ಅವರೆಲ್ಲ ಎದ್ದು ನಮಸ್ಕರಿಸಿದರು. ಆಕೆಯ ಮೋರೆ ಬಾಡಿದುದನ್ನು ಕಂಡು ಜನವೆಲ್ಲ ತಮಗೆ ಕಂಡಂತೆ ಆಡಿಕೊಳ್ಳತೊಡಗಿದರು. ಅವೆಲ್ಲ ವಿಲಾಸನ ಗರ್ಜನೆಯಲ್ಲಿ ಲೀನ ವಾಗಿ ಹೋದುವು. ಆತ ತನ್ನ ಚಹಾದ ಥಾಲಿಯನ್ನು ಮೇಜಿನ ಮೇಲೆ ಕುಪ್ಪರಿಸಿ "ಇನ್ನೂ ನಿದ್ದೆ ಹೋಗಿಲ್ಲವೆಂದರೇನು? ನಿನ್ನ ಆಚರಣೆಯಿಂದಲೂ ನನ್ನ ತಲೆ ಕಾದು ಹೋಗಿದೆ" ಎಂದು ಕೂಗಿದ.

ಆತನಿಗೆ ಸಿಟ್ಟು ಮಾಡುವ ಹಕ್ಕಿದೆಯೆಂಬುದು ನಿಜ. ಆದರೆ ಆಮಂತ್ರಿತ ಸದ್ಗೃಹಸ್ಥರಮುಂದೆ ಭಾವೀಪತಿಯು ಈ ರೀತಿ ಆಚರಿಸಿದುದು ಯಾರಿಗೂ ಸರಿಯೆನಿಸಲಿಲ್ಲ. ವಿಜಯೆ ಮಾತ್ರ ಕಣ್ಣೆತ್ತಿಯೂ ಆತನನ್ನು ನೋಡಲಿಲ್ಲ. ಎಲ್ಲರಿಗೂ ಪ್ರತಿವಂದನೆ ಅರ್ಪಿಸಿ ಆಚಾರ್ಯ ದಯಾಲು ಬಾಬುವಿನ ಹತ್ತರ ಹೋಗಿ ಶಾಂತವಾಗಿ "ತಮ್ಮ ಫಲಾಹಾರದಲ್ಲಾವ ವ್ಯತ್ಯಯವೂ ಬರಲಿಲ್ಲವಷ್ಟೆ? ನನ್ನದೇ ತಪ್ಪು. ಬೇಗನೇ ಎಚ್ಚರಾಗಲಿಲ್ಲ" ಎಂದಳು.

"ಇಲ್ಲ, ಮಗಳೇ. ನಮ್ಮಲ್ಲಿ ಯಾರಿಗೂ ತೊಂದರೆಯಾಗಲಿಲ್ಲ. ರಾಸ ಬಿಹಾರಿ, ವಿಲಾಸಬಿಹಾರಿಯರು ಎಲ್ಲ ದಕ್ಷತೆ ವಹಿಸಿದ್ದರು. ನಿಮ್ಮ ಪ್ರಕೃತಿ ನೆಟ್ಟಗಿಲ್ಲವೇ?"

ಇವರು ಮೊದಲು ಕಲಕತ್ತೆಯಲ್ಲಿ ಇರುತ್ತಿರಲಿಲ್ಲ. ಹೀಗಾಗಿ ಈಕೆಗೆ ಹಿಂದಿದ ಪರಿಚಯವಿರಲಿಲ್ಲ. ನಿನ್ನೆಯೂ ಇವರನ್ನು ಚೆನ್ನಾಗಿ ನೋಡಿರಲಿಲ್ಲ. ಆಕೆಗೆ ಈ ಹೊತ್ತು ಕೋಣೆಯಲ್ಲಿ ಕಾಲಿಟ್ಟೊಡನೆಯೇ ಈ ವೃದ್ಧರ ಶಾಂತ ಸೌಮ್ಯ ಮೂರ್ತಿಯನ್ನು ಕಂಡು ಆತ್ಮೀಯತೆಯೆನಿಸ ಹತ್ತಿತು.

ದಯಾಲ ಬಾಬುವು ಒಂದು ಮಂಚದ ಮೇಲೆ ಕೂತಿದ್ದರು. ಹತ್ತಿರ ದಲ್ಲಿ ಸ್ಥಳ ಇನ್ನೂ ಇತ್ತು. "ಮಗೂ, ಏಕೆ ನಿಂತಿರುವಿ? ಇಲ್ಲಿ ಕೂಡ್ರು. ಏನಾಗಿದೆ?

ಆಕೆ ಅಲ್ಲಿ ಕೂತುದೇನೋ ನಿಜ. ಮಾತಾಡಲಾಗಲಿಲ್ಲ. ಮೋರೆ ಅಡ್ಡ ಹಾಕಿದಳು. ಕ್ರಮೇಣ ಕಣ್ಣೀರನ್ನು ತಡೆಯುವದು ಶಕ್ಯವಾಗಲಿಲ್ಲ. ಮುದುಕ ಮತ್ತೊಮ್ಮೆ ಅದೇ ಪ್ರಶ್ನೆ ಕೇಳಿದ. ಹೇಗೋ ಮಾಡಿ "ಇಲ್ಲ" ಎಂದಳು.

ಮುದುಕ ಮನದಲ್ಲೀ ನಸುನಕ್ಕ. ಆಕೆಗೆ ತುಸು ಧೈರ್ಯತಾಳಲು ಅವಕಾಶ ಕೊಡುವುದಕ್ಕಾಗಿ ತಾನೇ ಮಾತಾಡ ತೊಡಗಿದ. ಇಂತಹ ತಾರುಣ್ಯದಲ್ಲಿಯೇ ಸತ್ಯಧರ್ಮದ ಬಗೆದಿದ್ದ ಕಳಕಳಿ ಶ್ರದ್ಧೆಯನ್ನು ಪ್ರಶಂಸಿಸಿ "ದೇವರ ದಯೆಯಿಂದ ನಿಮ್ಮ ಅಭಿವೃದ್ಧಿಯಾಗಲಿ. ಆದರೆ ಅದೊಂದು ತುಂಬ ಪ್ರಯಾಸದ ಕೆಲಸ. ನಾನೂ ಇದೇ ಊರಲ್ಲಿಯೇ ಬೆಳೆದವ. ಈ ನಾಡಿನ ಜನವು ಸಮರಸವಾಗುವಂತೆ ಮಾಡಿದರೆ ಮಾತ್ರ ನಿಜವಾಗಿಯೂ ನಿಲ್ಲ ಬಲ್ಲುದು. ನಿಮ್ಮ ಈ ಸಾಹಸಕ್ಕೆ ಏನೆಂದು ಆಶೀರ್ವದಿಸಲೆಂದೇ ತಿಳಿಯದಾಗಿದೆ"

ಮಂದಿರ ಪ್ರತಿಷ್ಠೆಯಲ್ಲಿ ನನಗಾವ ಉತ್ಸಾಹವೂ ಇಲ್ಲವೆಂದು ಆಕೆ ಹೇಳಲು ಬಯಸಿದ್ದಳು. ಆದರೆ ಆಕೆ ಮನಸ್ಸನ್ನು ಬಿಗಿಹಿಡಿದು ಮೃದುವಾಗಿ ನುಡಿದಳು "ನಿಜವಾಗಿಯೂ ನಿಲ್ಲಬಹುದು" ಎಂಬುದರ ಅರ್ಥವೇನು?"

"ಇನ್ನೇನು? ಬಂಗಾಲದ ಹಳ್ಳಿಗಳಲ್ಲಿ ಹರಡಿರುವ ಹಲವಾರು ಕುಸಂಸ್ಕಾರಗಳಿಗೆ ನಮ್ಮ ಧರ್ಮವೇ ಮದ್ದೆಂಬುದು ಬಲ್ಲೆ. ಆದರೆ ಅನುಕೂಲವಿಲ್ಲದ ಹಾಗೂ ಪ್ರಯೋಜನವಿಲ್ಲದ ಸ್ಥಳದಲ್ಲಿ ಅದು ಬದುಕಲಾರದು. ಮಗೂ, ಬಂಗಾಲೀ ಜನರ ಕುಂದು ಕೊರತೆಗಳನ್ನು ನೀನೂ ಸಹ ಬಲ್ಲೆ. ಅವೆಲ್ಲವುಗಳ ವಿಷಯವಾಗಿ ಆಳವಾಗಿ ವಿಚಾರಿಸು. ನೊಂದವನ ಕಂಬನಿಯ ನೊಂದ ನೊರಸಿದರೂ ಎಷ್ಟೋ ಕೆಲಸವಾಯಿತೆಂದು ನನ್ನಮತ."

ವಿಜಯೆ ಪ್ರಶ್ನಿಸಲಿಲ್ಲ. ಯೋಚಿಸಹತ್ತಿದಳು. ಸ್ವದೇಶದ ಉನ್ನತಿಯಾಗಬೇಕೆಂದು ಬಯಸುವವರಲ್ಲಿ ಆಕೆಯೊಬ್ಬಳು. ಈ ಮಂದಿರ ಪ್ರತಿಷ್ಠೆಯು ಕೇವಲ ಕೀರ್ತಿಯ ಅಭಿಲಾಷೆಗಾಗಿಯೇ ಮಾಡಿದ್ದೆಂದು ಆಕೆಗೆ ಗೊತ್ತು. ದಯಾಲನ ಮಾತಿಸಿಂದ ಆಕೆ ಹೊಸ ದೃಷ್ಟಿಯಿಂದ ಈ ಸಮಸ್ಯೆಯನ್ನು ಕುರಿತು ವಿಚಾರಿಸಹತ್ತಿದಳು. 'ವಿಲಾಸನು ನಿಜವಾಗಿ ಹೃದಯಹೀನನಲ್ಲ; ಕ್ರೂರನಲ್ಲ. ಆತನ ಕಾಠಿಣ್ಯವು ಕೇವಲ ಧರ್ಮಶ್ರದ್ಧೆಯಿಂದ ಬಂದದು. ಮಾನವೇತಿಹಾಸದಲ್ಲಿ ಇಂತಹ ಘಟನೆಗಳಿಗೆ ಕೊರತೆ ಇಲ್ಲ. ಎಂತಹ ಒಳ್ಳೆಯ ಕೆಲಸದಿಂದಲೂ ಒಬ್ಬಿಬ್ಬರಿಗಾದರೂ ಹಾನಿ ತಟ್ಟದೇ ಇರುವದಿಲ್ಲ. ಎಂದು ಎಲ್ಲೋ ಓದಿದ ಹಾಗೆ ನೆನಪು ಬಂತು. ಹಲವರ ಹಿತವಾಗುವ

ಕಾರ್ಯದಲ್ಲಿ ಒಬ್ಬೊಬ್ಬರಿಗಾದ ಹಾನಿಯನ್ನು ಆ ಕಾರ್ಯಕರ್ತ ತು ಲೆಕ್ಕಿಸುವ ದಿಲ್ಲ. ಅದಕ್ಕಾಗಿ ಅವರಿಗೆ ಕಠೋರರೆಂಬ ಹೆಸರು ಬರುವುದೂ ಉಂಟು. ಇದರಲ್ಲಿ ವಿಲಾಸನದೇನೂ ತಪ್ಪಿಲ್ಲ. ದೊಡ್ಡವರ ಕೃತಿ ದೊಡ್ಡದು. ನಮಗೆ ಅರ್ಥವಾಗದ ಮಾತ್ರಕ್ಕೆ ಹುಳುಕು ತೆಗೆಯುವದು ತಪ್ಪು.''

ವೇಳೆಯಾದುದರಿಂದ ಒಬ್ಬೊಬ್ಬರಾಗಿ ಜನ ಎದ್ದರು. ವಿಜಯೆಯೂ ಎದ್ದಳು. ರಾಸಬಿಹಾರಿಯು ಮಗನನ್ನು ಕರೆದು ಆತನಿಗೆ ಸಲಹೆ ಇತ್ತ. ಹಾಗೂ ''ಮಗೂ, ನಿಮಗೇನಾಗಿದೆ'' ಎಂದು ವಿಜಯೆಗೆ ಕೇಳಿದ.

''ಏನಾಗಿಲ್ಲ. ಚೆನ್ನಾಗಿರುವೆ. ನಿನ್ನೆ ರಾತ್ರಿ ನಿದ್ದೆ ಹತ್ತಲಿಲ್ಲ. ಅದರಿಂದ ಹೀಗೆ ಕಾಣಿಸುತ್ತಿರಬೇಕು.''

ವಿಲಾಸನ ಮುಖದಲ್ಲಿ ಗೆಲವು ನಲಿದಿತ್ತು. ಆತನೂ ಮೃದುವಾಗಿ ನುಡಿದ. ''ಹಾಗಾದರೆ ನೀವು ಈ ಬಿಸಲಲ್ಲಿ ಎಲ್ಲಿಯೂ ಹೋಗುವುದು ಬೇಡ. ಸ್ನಾನ ತೀರಿಸಿ ಊಟಮಾಡಿ ಮಲಗಿರಿ. ಋತು ಬದಲಾಗುವ ಕಾಲದಲ್ಲಿ ಎಷ್ಟು ಜಾಗರೂಕತೆಯಿಂದಿದ್ದರೂ ಸಾಲದು.''

ತನ್ನ ವ್ಯವಹಾರಕ್ಕಾಗಿ ಕ್ಷಮೆ ಕೇಳೋಣ ಎಂದೇನೋ ಒಮ್ಮೆ ಭಾವಿಸಿದ. ಆದರೆ ಅಂತಹ ಸ್ವಭಾವ ಅವನದಲ್ಲ. ಅದಕ್ಕಾಗಿ ಆಮಂತ್ರಿತ ಜನರನ್ನು ಹಿಂಬಾಲಿಸಿ ತೀವ್ರವಾಗಿ ಹೊರಟು ಹೋದ.

ವಿಜಯೆ, ಕಾಣುವವರೆಗೂ ಆತ ಹೋದ ದಾರಿಯನ್ನೇ ನೋಡುತ್ತ ನಿಂತಿದ್ದಳು. ಆಮೇಲೆ ನೀಳವಾಗಿ ಉಸಿರನ್ನೆಳೆದು ಮಾಳಿಗೆಗೆ ಹೋದಳು. ಮೊದಲಿನ ವೇದನೆ ಈಗ ಇರಲಿಲ್ಲ.

ಸಂಜೆಯಾದೊಡನೆ ಮಂದಿರದ ಪ್ರತಿಷ್ಠೆ ಯಥಾರೀತಿ ಸಾಂಗವಾಯಿತು ಮಧ್ಯದಲ್ಲಿ ಅಲಂಕೃತವಾದ ಎರಡು ಖುರ್ಚಿಗಳನ್ನಿಟ್ಟಿದ್ದಳು. ಒಂದರ ಮೇಲೆ ವಿಜಯೆ ಕುಳಿತದ್ದಳು. ಇನ್ನೊಂದರ ಮೇಲೆ ಕೂಡ್ರುವವರು ಯಾರೆಂದು ಹೇಳುವ ಅವಶ್ಯಕತೆ ಇರಲಿಲ್ಲ. ವಿಜಯೆಗೆ ಒಮ್ಮೆ ಒಂದು ವಿಚಾರ ಸುಳಿಯಿತು. ಆದರೆ ವಿಲಾಸನು ತನ್ನ ಸ್ಥಾನವನ್ನಲಂಕರಿಸಿದೊಡನೆಯೇ ಆ ವಿಚಾರ ಮರೆಯಾಯಿತು.

೧೫

ಉತ್ಸವವನ್ನು ಆದಷ್ಟು ದಿನ ಬೆಳೆಸಬೇಕೆಂದು ವಿಲಾಸನ ಬಯಕೆ ಇದ್ದಿತಾದರೂ ಬಂದ ಜನಕ್ಕೆಲ್ಲ ಕೆಲಸವಿದ್ದುದರಿಂದ ಒಂದೇ ದಿನದಲ್ಲಿ ಮುಗಿಸಬೇಕಾಯಿತು. ಸಾಯಂಕಾಲ ರಾಸಬಿಹಾರಿಯು ಚಿಕ್ಕ ಭಾಷಣ ಮಾಡಿದ. "ಮೂರ್ತಿಪೂಜೆಯ ತಮಸಿನಿಂದ ಸತ್ಯದ ಜ್ಯೋತಿಯೆಡೆಗೆ ಜನ ಮನವನ್ನೆಳೆಯಲು ಕಾರಣವಾದ ಈ ಮಂದಿರದ ಕರ್ತೃಗಳಿಗೆ ಶುಭವಾಗಲಿ. ನಿಕಟಭವಿಷ್ಯದಲ್ಲಿಯೇ ಈ ನವೀನ ಜೀವಿಗಳು ದಂಪತಿಗಳಾಗಲಿ. ಆ ಸೌಭಾಗ್ಯ ನೋಡುವಂತಹ ಕಾಲ ನಮಗೆಲ್ಲ ದೊರೆಯಲಿ. "ಮಗೂ, ವಿಜಯಾ, ವಿಲಾಸ, ನೀವು ಇವರೆಲ್ಲರಿಗೂ ನಮಸ್ಕರಿಸಿರಿ. ಮಾನ್ಯರೇ, ಈ ಮಕ್ಕಳನ್ನು ಹರಿಸಿರಿ."

ವಿಜಯಾ, ವಿಲಾಸರುನಮಸ್ಕರಿಸಿದರು. ಹಿರಿಯ ಬ್ರಾಹ್ಮರೆಲ್ಲ ಹರಸಿದರು. ನಂತರ ಸಭೆ ವಿಸರ್ಜನೆ ಯಾಯಿತು.

ಮನೆಗೆ ಮರಳಿದಾಗ ಮನವು ಹಗುರಾಗಿತ್ತು. ಧರ್ಮಶ್ರದ್ಧೆಯ ಆನಂದ ಉತ್ಸಾಹದಿಂದ ಆಕೆಯ ಹೃದಯ ತುಂಬಿ ತುಳುಕುತ್ತಿತ್ತು. ಅನ್ನಕೆ ಆಳಾಗಿ ಕಾಮಕ್ಕೆ ಹೋಳಾಗಿ ಬಾಳುವುದೇ ಬಾಳಲ್ಲ. ಜೀವ ಜೀವಕೆ ಉದ್ದೀಪನವಾದುದೇ ಜೀವನ. ಎಂದು ತನ್ನಷ್ಟಕ್ಕೇ ಅಂದುಕೊಂಡಳು.

" ವಿಲಾಸನೊಡನೆ ಮತ ಭೇದವಿರಬಹುದು. ಆದರೆ ಧರ್ಮದ ದೃಷ್ಟಿಯಿಂದ ಮಾತ್ರ ಹಾಗಾಗಲಾರದು. ವಿಲಾಸನಂತಹ ದೃಢಸಂಕಲ್ಪದ ಧರ್ಮ ಪರಾಯಣ, ಕರ್ತವ್ಯನಿಷ್ಠ ವ್ಯಕ್ತಿಯ ಜೊತೆಗೆ ಬಾಳುವ ಸಂಧಿ ಒದಗಿದುದು ಸುದೈವ. ದೇವರು ನನ್ನಿಂದ ಅನೇಕ ಒಳ್ಳೆಯ ಕೆಲಸಗಳನ್ನು ಮಾಡಿಸುವ ದಕ್ಕಾಗಿಯೇ ಈ ರೀತಿಯ ಬುದ್ಧಿಯನ್ನು ಕೊಟ್ಟಿರಬೇಕು "

ಮೂರನೇ ದಿನ ವಿಲಾಸನು ಎಲ್ಲರಿಗೂ ಕೈಜೋಡಿಸಿ "ತಮ್ಮಂತಹರ ಪಾದಧೂಲಿಯು ತಿಂಗಳಿಗೊಮ್ಮೆಯಾದರೂ ಬೀಳುವಂತಾಗಲಿ" ಎಂದು ಬಿನ್ನವಿಸಿದ. ಅನೇಕರು ಇದಕ್ಕೆ ತಮ್ಮ ಒಪ್ಪಿಗೆಯನ್ನಿತ್ತು ತೆರಳಿದರು.

" ಮಗೂ ವಿಜಯಾ, ಮಂದಿರದ ಉನ್ನತಿಯಾಗಬೇಕಾದರೆ ದಯಾಲ ಬಾಬುವನ್ನು ಇಲ್ಲಿಯೇ ಇಟ್ಟುಕೊಳ್ಳಬೇಕು "

" ಕಾಕಾಜಿ, ಹಾಗೆಂದಾದರೂ ಅವರು ಒಪ್ಪಬಹುದೇ ? "

" ಒಪ್ಪುದಿದ್ದರೆ ನಾನೆಲ್ಲಿ ಹೇಳುತ್ತಿದ್ದೆ. ಅವರೂ, ನಾನೂ ಬಾಲ್ಯದ ಮಿತ್ರರು. ಅವಳ ಸ್ವಭಾವ ಬಲ್ಲೆ. ಬಡವನಾದರೂ ಉಚ್ಚ ವಿಚಾರದವ. ಜಮೀನು ದಾರಿಯ ಯಾವುದಾದರೂ ಸಣ್ಣ ಕೆಲಸ ಕೊಟ್ಟು ಇಟ್ಟುಕೊಳ್ಳ ಬಹುದು. ಮಂದಿರದಲ್ಲಿಯೂ ಕೋಣೆಗಳಿಗೆ ಕೊರತೆ ಇಲ್ಲ. ಒಂದೆರಡಿದ್ದರ ಆತನ ಪರಿವಾರಕ್ಕೆ ಹೆಚ್ಚಾಯಿತು. "

ಆ ಮುದುಕನ ಬಗ್ಗೆ ಆಕೆಗೆ ಆದರವಿತ್ತು. ಆತನ ಬಡತನವನ್ನು ಕೇಳಿ ದುಃಖವಾಯಿತು. " ಅವರನ್ನು ಇಲ್ಲಿಯೇ ಇಟ್ಟುಕೊಳ್ಳಿ. ನನಗೆ ತುಂಬ ಸಂತೋಷ. "

ಹಾಗೆಯೇ ಘಟಿಸಿತು. ದಯಾಲನು ಸಪರಿವಾರವಾಗಿ ಅಲ್ಲಿ ಇಳ ಕೊಂಡನು.

ದಿನಗಳು ಉರುಳಿದವು. ಪೌಷ್ಯ ಮುಗಿದು ಮಾಘಮಾಸದ ಅರ್ಧ ಕಳೆಯಿತು. ಜಮೀನು, ಮಂದಿರ, ವ್ಯವಸ್ಥೆ ಸರಾಗವಾಗಿ ಸಾಗಿದ್ದವು. ಯಾವ ತೊಂದರೆ ಇದ್ದಂತೆಯೂ ಕಂಡು ಬರಲಿಲ್ಲ.

ನರೇಂದ್ರನ ಸುಳಿವಿಲ್ಲ. ಸುದ್ದಿಯೂ ಇಲ್ಲ. ಎರಡು ದಿನಕ್ಕಾಗಿ ಬಂದಿದ್ದ. ಅವಧಿ ಮುಗಿದೊಡನೆಯೇ ಹೊರಟು ಹೋದ. ಆದರೂ ಮೈಕ್ರೋಸ್ಕೋಪಿನ ಕಡೆಗೆ ಲಕ್ಷ ಹೋದಾಗಲೆಲ್ಲ ಒಮ್ಮೆ ತಳಮಳ ಗೊಳ್ಳು ವಳು. ಅವನಿಗೆ ಆ ಸಮಯದಲ್ಲಿ ಕೆಲ ಹೆಚ್ಚಿಗೆ ಹಣ ಕೊಟ್ಟಿದ್ದರೆ ಒಳಿತಾಗು ತ್ತಿತ್ತಲ್ಲ ! ಎಂಬ ವಿಚಾರ ಆಕೆಗೆ. ಇನ್ನೊಂದು ವಿಚಾರ ನೆನಪಾದಾಗೆಲ್ಲ ಆಕೆಗೆ ಸಂಕೋಚವಾಗುತ್ತಿತ್ತು. " ಒಂದೆರಡೇ ದಿನದ ಪರಿಚಯ ಅದೆಷ್ಟು ಗಾಢವಾಗಿದ್ದಿತು? ಸುದೈವದಿಂದ ಅದು ಹೊರಬೀಳಲಿಲ್ಲ. ನೀರ ಮೇಲಿನ ಗುಳ್ಳೆಯಂತೆ ಒಡದೇ ಹೋಗುತ್ತಿತ್ತು. ಆದರೆ ಮೋರೆ ತೋರಿಸಲು ಮಾತ್ರ ಸ್ಥಳವಿರುತ್ತಿದ್ದಿಲ್ಲ. ," ಹೀಗೆ ಮಾಘವೂ ಕಳೆಯಿತು.

ಫಾಲ್ಗುಣದ ಆರಂಭದಲ್ಲಿ ಬಹಳ ಶಕೆ ಬಿದ್ದುದರಿಂದ ಎಲ್ಲ ಕಡೆಗೂ ಜ್ವರದ ಹಾವಳಿ. ದಯಾಲಬಾಬು ಅಸ್ವಸ್ಥರಾಗಿ ಎರಡು ದಿನಗಳಾಗಿವೆ. ಇಂದು ಅವರನ್ನು ನೋಡಲೆಂದು ಸಿದ್ಧಳಾಗಿ ಹೊರಟಿದ್ದಳು.

" ನಮಸ್ಕಾರ "

ತಲೆಯೆತ್ತಿ ನೋಡಲು " ನರೇಂದ್ರ "

ಆಕೆಯ ಬಾಯಿಂದ ಮಾತೇ ಹೊರಡಲಿಲ್ಲ. ಪ್ರತಿ ನಮಸ್ಕಾರವೂ ಇಲ್ಲ. ಕೂಡ್ರಲಿಕ್ಕೂ ಹೇಳಲಿಲ್ಲ ನರೇಂದ್ರನೆ ಕೈಯಲ್ಲಿದ್ದ ಬೆತ್ತವನ್ನು ಒಂದೆಡೆ ಇಟ್ಟು ಖುರ್ಚಿಯೆಳೆದು ಕೂತುಕೊಂಡ.

“ಈ ಕೆಲಸದಿಂದ ಬಿಡುಗಡೆಯೆಂಬುದೇ ಇಲ್ಲ. ನನಗೂ ಒಂದು ಕಪ್ಪು ಚಹಾ ತರಲು ಹೇಳಿ” “ತರಿಸುತ್ತೇನೆ” ಎಂದು ಹೊರಗೆ ಹೋದಳು. ಅಲ್ಲಿ ಒಮ್ಮೆಲೇ ಆಳಿಗೆ ಹೇಳಿದರೂ ಬರಲು ಶಕ್ಯವಾಗಲಿಲ್ಲ. ಮಾಳಿಗೆಯ ಕಟಾಂಜನವನ್ನು ಹಿಡಿದು ಸುಮ್ಮನೆ ನಿಂತಿದ್ದಳು. ಆಕೆಯ ಹೃದಯದಲ್ಲಿ ತುಮುಲ ನಡೆದಿದ್ದಿತು. ಆಕೆಗೆ ಹಿಂದೆಂದೂ ಇಂತಹ ಪರಿಸ್ಥಿತಿ ಬಂದಿರಲಿಲ್ಲ. ಆ ಸ್ಥಿತಿಯಲ್ಲಿ ಯಾರೊಡನೆಯೂ ಮಾತಾಡುವುದು ಶಕ್ಯವಿರಲಿಲ್ಲ. ಆದರೆ ೫-೬ ನಿಮಿಷದ ನಂತರ ಕಾಲೀಪದನು ಚಹಾ ತೆಗೆದುಕೊಂಡು ಹೋಗುತ್ತಿರುವುದನ್ನು ಕಂಡು ಆತನನ್ನು ಹಿಂಬಾಲಿಸಿದಳು.

ನರೇಂದ್ರನು ನಕ್ಕ “ನನ್ನಿಂದ ನಿಮಗೆ ತೊಂದರೆಯಾಯಿತು. ಆದರೆ ನಾನು ೫ ನಿಮಿಷಕ್ಕಿಂತ ಹೆಚ್ಚು ನಿಮ್ಮ ವೇಳೆಯನ್ನು ತೆಗೆದು ಕೊಳ್ಳುವದಿಲ್ಲ.”

“ಆಗಲಿ. ಮೊದಲು ಚಹಾ ತೆಗೆದುಕೊಳ್ಳಿ. ಅಲ್ಲಾ. ಆ ಕಿಡಕಿ ಯಾರು ತೆಗೆದರು?”

“ನಾನೇ ತೆಗೆದೆ”

“ಹೇಗೆ?”

“ಇದೇ ಕೈಯಿಂದ”

“ನಿಮ್ಮ ಬೆರಳಿನಲ್ಲಂತೂ ಜೀವ ಇದ್ದ ಹಾಗೇ ಕಾಣುವದಿಲ್ಲ. ಅದೇನು? ಉಕ್ಕಿನದೇ? ಹೊರಗಿನಿಂದ ಗಟ್ಟಿಯಾಗಿ ದೂಕಿದ ಹೊರತು ಈ ಕದ ತೆಗೆಯುವುದು ಶಕ್ಯವಿದ್ದಿಲ್ಲ.. ಈ ರೀತಿ ಈ ಕದವನ್ನು ತೆಗೆದವರು ಹಿಂದೆ ಯಾರೂ ಇರಲಿಲ್ಲ”

“ನಿಜ. ನಾನು ಚನ್ನಾಗಿ ಹಿಚುಕಿದರೆ ಯಾರ ಕೈಯಾದರೂ ಮುರಿಯಲೇ ಬೇಕೆಂದು ನನಗನಿಸುತ್ತಿದೆ” “ಇರಲಿ. ಇಗೊಳ್ಳಿ, ನಿಮ್ಮ ಇನ್ನೂರು ರೂಪಾಯಿ. ಇಷ್ಟರ ಸಲುವಾಗಿಯೇ ನನ್ನನ್ನು ಠಕ್ಕ, ಮೋಸಗಾರೆ ಎಂದು ಹೇಳಿದ್ದೀರಾ? ನನ್ನ ಯಂತ್ರವನ್ನಷ್ಟು ಕೊಡಿರಿ”

ಆಕೆಗೆ ಸಿಟ್ಟು ಬಂದಿತು. ಆದರೂ ಬಿಗಿ ಹಿಡಿದು " ಇನ್ನೂ ಏನೇನು ಹೇಳಿ ಕಳಿಸಿದ್ದೆ ? "

" ಅದೆಲ್ಲ ನನಗೆ ಜ್ಞಾಪಕವಿಲ್ಲ. ನಾನು ಇದೇ ೯॥ ಯ ಗಾಡಿಗೆ ಹೋಗಬೇಕಾಗಿದೆ. ಅಲ್ಲಿಯೇ ನನಗೊಂದು ಒಳ್ಳೆಯ ನೌಕರಿ ಸಿಕ್ಕಿದೆ: ಅದ ಕ್ಕಾಗಿ ಬರ್ಮಾಕ್ಕೆ ಹೋಗಲಿಲ್ಲ."

" ನಿಮ್ಮ ದೈವ ತೆರೆಯಿತು. "

"ಅದೇನೋ ನಿಜ. ಆದರೆ ಪುರುಸೊತ್ತಿಲ್ಲ. ಒಂಬತ್ತಾಗುತ್ತ ಬಂದಿತು."

ಆಕೆಯ ಮೋರೆ ಬಾಡಿತು. ಆದರೆ ನರೇಂದ್ರ ಅತ್ತ ಲಕ್ಷಿಸಲಿಲ್ಲ. " ಈಗಲೇ ಹೋಗಬೇಕು. ತರಲು ಹೇಳಿ" ಎಂದನು.

" ನಿಮ್ಮ ಹಣ ಬಂದೊಡನೆ ಮಾಲು ತಿರುಗಿ ಕೊಡಬೇಕೆಂದು ಮಾತಾಗಿರಲಿಲ್ಲವಲ್ಲ ! "

ನರೇಂದ್ರನಿಗೆ ನಾಚಿಕೆಯಾಯಿತು. " ಹಾಗೇನೂ ಆಗಿರಲಿಲ್ಲ ಆದರೆ ನಿಮಗೆ ಅದರ ಅವಶ್ಯಕತೆ ಇಲ್ಲ "

" ಇಂದು ಅವಶ್ಯಕತೆ ಇರದಿದ್ದರೆ ಮುಂದೆಂದೂ ಇರಲಾರದೇ "

" ನಿಮಗದರ ಉಪಯೋಗ ವಾಗಲಿಕ್ಕಿಲ್ಲ. ಆದರೆ ನನಗೆ........"

" ಯಂತ್ರ ಕೊಳ್ಳುವುದರಿಂದ ಆಪತ್ಕಾಲದಲ್ಲಿ ಸಹಾಯ ಮಾಡಿ ದಂತಾದೀತೆಂದು ಆಗ ಹೇಳಿದ್ದಿರಲ್ಲ; ಈಗ ಈ ಮಾತನ್ನಾಡುವಿರಾ? "

" ಇಂತಹ ಸಾಮಾನನ್ನು ಹೀಗೆ ಸುಮ್ಮನೆ ಬೀಳಗೊಡುವಿರೆಂದು ನಾನು ತಿಳಿದಿರಲಿಲ್ಲ. ನೀವು ಅಡವಿಟ್ಟು ಕೊಂಡಿದ್ದಿರೆಂದು ಭಾವಿಸಿರಿ. ನಾನು ಬಡ್ಡಿ ಕೊಡುವೆ."

" ಎಷ್ಟು ಕೊಡುವಿರಿ ? "

" ಬೇರೊಬ್ಬರು ಕೊಡುವಷ್ಟು. "

" ಅದಾಗದು. ಯಾಕೆಂದರೆ ಇದನ್ನು ೪೦೦ ರೂಪಾಯಿಗೆ ಕೊಳ್ಳು ವವರಿದ್ದಾರೆ"

" ಹಾಗಾದರೆ ಹಾಗೇ ಮಾಡಿರಿ ನನಗದರ ಅವಶ್ಯಕತೆ ಇಲ್ಲ. ಇನ್ನೂರು ರೂಪಾಯಿಗೆ ನಾನ್ನೂರು ಬಯಸುವವರ ಹತ್ತರ ನನ್ನದೇನೂ ಮಾತಿಲ್ಲ. "

ಆಕೆಗೆ ನಗೆ ತಡೆಯಲಾಗಲಿಲ್ಲ. ಆಕೆಯ ಸೋಗು ಹೊರಬೀಳು ತ್ತಿತ್ತು. ಆದರೆ ಅತ್ತ ನರೇಂದ್ರನ ಲಕ್ಷ್ಯವಿದ್ದಿಲ್ಲ. "ನೀವಿಂತಹ ಶಾಯಲಾಕ ರೆಂಬು ಗೊತ್ತಿದ್ದರೆ, ನಾನೆಂದೂ ಸುಳಿಯುತ್ತಿರಲಿಲ್ಲ"

"ತಂದೆಯ ಸಾಲಕ್ಕೆ ನಿಮ್ಮ ಮನೆ ತೆಗೆದುಕೊಂಡಾಗಲೂ ತಿಳಿಯ ಲಿಲ್ಲವೇ?"

"ಇಲ್ಲ. ಅದರಲ್ಲಿ ನಿಮ್ಮ ಅಂಗವಿರಲಿಲ್ಲ. ಅದು ನಮ್ಮ ನಿಮ್ಮ ಪಾಲಕರ ಲ್ಲಾದ ಮಾತುಕತೆ ಅದರ ಹೊಣೆ ನಮ್ಮದಲ್ಲ. ಆಗಲಿ ಹೋಗುತ್ತೇನೆ"

"ಊಟಮಾಡಿ ಹೋದರಾಗದೇ?"

"ಇಲ್ಲ. ಊಟಕ್ಕಾಗಿ ಬಂದಿಲ್ಲ"

"ಇರಲಿ. ತಾವು ಡಾಕ್ಟರರು, ನಾಡಿ ಪರೀಕ್ಷೆ ಮಾಡಬಹುದಲ್ಲವೇ?"

"ಇದೇನು ನಗೆಚಾಟಿಕೆ ನಡಿಸಿದ್ದೀರಿ. ನಿಮ್ಮ ಹತರ ಬೇಕಷ್ಟು ಹಣದ ರಾಶಿ ಬಿದ್ದಿರಬಹುದು. ಅದರ ಗರ್ವದಿಂದ ಹೀಗೆಲ್ಲ ಮಾತಾಡಲಾರಿರಿ. ನಾಲಿಗೆ ಬಿಗಿಹಿಡಿದು ಮಾತನಾಡಿರಿ." ಆತನಿಗೆ ತುಂಬಾ ಸಿಟ್ಟು ಬಂದಿತ್ತು. ಹೊರಡಲು ಬೆತ್ತ ಎತ್ತಿಕೊಂಡ,

"ಏನುಮಾಡುವಿರಿ? ನಿಮ್ಮ ಮೈಯಲ್ಲಿ ಬಲ, ಕೈಯಲ್ಲಿ ಕೋಲು ಇದೆಯೆಲ್ಲವೇ?"

"ನಿಮಗೇನು ಹೆಚ್ಚುಕಡಿಮೆಯೆಂಬುದೇ ಇಲ್ಲ. ಬಾಯಿಗೆ ಬಂದಂತೆ ಗಳಹುತ್ತೀರಿ. ನಿಮ್ಮಂಥವರನ್ನು ಎಲ್ಲಿಯೂ ನೋಡಿರಲಿಲ್ಲ." ಆತ ಎತ್ತಿದ ಕೋಲು ಬಿಸುಟಿ ಹತಾಶನಾಗಿ ಖರ್ಚಿಯಲ್ಲಿ ಕುಕ್ಕರಿಸಿದ.

"ಆದರೆ ನೋಡಿ, ಜ್ಞಾಪಕವಿಟ್ಟುಕೊಳ್ಳಿ".... ಇನ್ನೂ ಏನೇನನ್ನೋ ಹೇಳಬೇಕೆಂದಿದ್ದಳು. ಆದರೆ ನಗೆ ತಡೆಯಲಾರದೆ ತೀವ್ರವಾಗಿ ಹೋಗಿ ಬಿಟ್ಟಳು.

ನರೇಂದ್ರ ಕೆಲಹೊತ್ತು ಕುಳಿತು, ಇನ್ನೇನು ಹೊರಟುಹೋಗುವದರ ಲ್ಲಿದ್ದ, ಅಷ್ಟರಲ್ಲಿ ವಿಜಯೆ ತಿರುಗಿ ಬಂದು "ನನ್ನ ಹೊತ್ತನ್ನೆಲ್ಲ ನೀವೇ ಹಾಳುಮಾಡಿದಿರಿ. ಅದಕ್ಕಾಗಿ ನಿವು ಈಗ ಹೋಗಲಾರಿರಿ. ನಮ್ಮ ಹಿರಿಯ ರೊಬ್ಬರು ಅಸ್ವಸ್ಥರಿದ್ದಾರೆ. ಅವರಿಗೆ ತುಂಬ ಜ್ವರ. ನೀವು ಅವರನ್ನೊಮ್ಮೆ ನೋಡುವದು ಅವಶ್ಯವಾಗಿದೆ."

" ಹಾಗೇ ಆಗಲಿ, "

" ತುಸು ತಡೆಯಿರಿ ನಿಮ್ಮ ಪರಿಚಿತ ಹುಡುಗ ಪರೇಶ ಅಸ್ವಸ್ಥನಿದ್ದಾನೆ ಅವನನ್ನು ಇಲ್ಲಿ ತರಲು ಹೇಳಿಬಂದಿದ್ದೇನೆ."

ಪರೇಶನ ತಾಯಿ ಮಗನನ್ನು ತಂದಳು. ನರೇಂದ್ರ ಕೆಲಹೊತ್ತು ನೋಡಿದ. " ಅಮ್ಮಾ, ಅವನನ್ನು ತೆಗೆದುಕೊಂಡು ಹೋಗಿ. ನಾನು ಪರೀಕ್ಷಿಸಿದೆ "

ವಿಜಯೆ, ಪರೇಶನ ತಾಯಿ— ಇಬ್ಬರೂ ಚಕಿತರಾದರು. "ಡಾಕ್ಟರರೇ. ಮಗುವಿನ ಮೈಕೈಯೆಲ್ಲ ನೋಯುತ್ತಿದೆ. ನಾಡೀ ಪರೀಕ್ಷೆ ಮಾಡಿ ಮದ್ದು ಗಿದ್ದು........"

"ನನಗೆ ಗೊತ್ತಾಗಿದೆ ಬಿಡು. ಗಾಳಿ ಹವೆ ತಾಗಬಾರದು. ತೆಗೆದು ಕೊಂಡು ಹೋಗಿ. ಮದ್ದು ಕಳಿಸುವೆ." ತಾಯಿ ಕಳವಳಗೊಂಡು ಮಗನ್ನ ನ್ನೆತ್ತಿಕೊಂಡು ಹೋದಳು. "ಇತ್ತ ಮೈಲಿ ಹಬ್ಬುಹತ್ತಿದೆ. ಈ ಹುಡುಗನಿಗೂ ಅವರದೇ ಚಿನ್ಹವಿದೆ. ಅದಕ್ಕಾಗಿ ತುಸು ಕಾಳಜಿಯಿಂದ ವರ್ತಿಸಲು ಹೇಳಿ."

ವಿಜಯೆಯ ಮೋರೆ ಕಪ್ಪಿಟ್ಟಿತು "ಮೈಲಿ? ಅಯ್ಯೋ...."

"ಆಗದೇನು ಮಾಡೀತು. ಈ ಹೊತ್ತು ಸ್ಪಷ್ಟವಾಗಿ ಕಾಣದಿದ್ದರೂ ನಾಳೆ ಗೊತ್ತಾದೀತು. ನಿಮ್ಮ ಹಿರಿಯರನ್ನು ಕಾಣುವ ಅವಶ್ಯಕತೆಯಿಲ್ಲ ವೆಂದು ನನಗನಿಸುತ್ತದೆ. ಅವರಿಗೂ ಇದೇ ಬೇನೆ ಇರಬೇಕು."

ಆಕೆ ಶರೀರ ಅಂಜಿಕೆಯಿಂದ ಥರಥರ ಕಂಪಿಸಹತ್ತಿತು. ಶವದಂತೆ ಖುರ್ಚಿಯಲ್ಲಿ ಕುಕ್ಕರಿಸಿದಳು.

"ಬಾಬೂಜಿ, ನನಗೂ ನಿನ್ನೆ ಜ್ವರ ಬಂದಿತ್ತು. ಮೈಕೈ ಹೊಡೆತ ವಿತ್ತು ಅದೇ ವಿಕಾರವಿರಬಹುದೇ? "

"ಹೊಡೆತ ಭಯಂಕರವಲ್ಲ. ನಿಮ್ಮ ಅಂಜಿಕೆ ಮಾತ್ರ ಭಯಂಕರವಾ ದದ್ದು. ಜ್ವರಬಂದವರಿಗೆಲ್ಲ ಮೈಲಿಯಾಗುತ್ತಿದೆಯೇ? "

"ಹಾಗಾದರೆ ನನ್ನನ್ನು ನೋಡಿಕೊಳ್ಳುವವರಾರು? ನನ್ನವರೆಂಬುವ ರಾದರೂ ಯಾರು? "

"ನೋಡಿಕೊಳ್ಳುವವರು ನಿಮಗೆ ಬೇಕಾದಷ್ಟು ದೊರೆಯಬಹುದು. ಆದರೆ ಅಂಜಬೇಡಿ. ಅದರ ಅವಶ್ಯಕತೆ ಇಲ್ಲ. "

"ಆಗದಿದ್ದರಂತೂ ಒಳಿತೇ ಆಯಿತು. ಆದರೆ ನಿನ್ನೆ ರಾತ್ರಿ ಮಾತ್ರ ನಿಜವಾಗಿಯೂ ಜ್ವರ ಬಂದಿತ್ತು. ಈಗಲೂ ತುಸು ಮೈಮೇಲೆ ಇದ್ದಂತಿದೆ. ಬೆಳಿಗ್ಗೆ ಮತ್ತೆ ಅವರನ್ನು ನೋಡಲು ಹೋಗಿದ್ದೆ," ಎಂದವಳೇ ಕೈ ಮುಂದೆ ಮಾಡಿ ಪರೀಕ್ಷಿಸಲು ವಿನಂತಿಸಿದಳು. ಆತ ಕೆಲಹೊತ್ತು ಪರೀಕ್ಷಿಸಿದ.

"ಈ ಹೊತ್ತು ಏನನ್ನೂ ತಿನ್ನಬೇಡಿ. ನಾಳೆ ನಾಡದು ಇನ್ನೊಮ್ಮೆ ಬರುವೆ."

"ತಮ್ಮ ಮರ್ಜಿ." ಆ ಕಾಲದ ಆಕೆಯ ಮೋರೆಯನ್ನು ನರೇಂದ್ರನಿಂದ ನೋಡಲಾಗಲಿಲ್ಲ. ಆತನ ಹೃದಯ ಅನುಕಂಪದಿಂದ ತುಂಬಿತು.

ಕೆಲಸದ ಒತ್ತಡದ ಮೂಲಕ ಮಾರನೆ ದಿನ ಕಲಕತ್ತೆ ಬಿಡಲಾಗಲಿಲ್ಲ. ಅದರ ಮಾರನೆಯ ದಿನ ಬೆಳಿಗ್ಗಿನ ಒಂಬತ್ತರೊಳಗಾಗಿಯೇ ಆತ ತಿರುಗಿ ಬಂದ. ಮನೆಯಲ್ಲಿ ಕಾಲಿಟ್ಟೊಡನೆಯೇ ಕಾಲೀಪದನು "ಯಜಮಾನಿಯರಿಗೆ ಬಹಳ ಜ್ವರ. ಒಮ್ಮೆ ಮೇಲೆ ಬನ್ನಿ" ಎಂದನು.

ಆಗ ಆಕೆಗೆ ತುಂಬ ಜ್ವರ. ಖುರ್ಚಿಯಮೇಲಿಬ್ಬರೂ—ದಾಸ, ವಿಲಾಸರು ಗಂಭೀರ ಮುದ್ರೆಯಿಂದ ಮುಂಡಿಸಿದ್ದರು. ಆಕೆಯ ತಲೆಯ ಬಳಿಯಲ್ಲಿ ಒಬ್ಬ ಮುಸುಕಿನ ಹೆಂಗಸು ಕುಳಿತಿದ್ದಳು. ಪಿತಾಪುತ್ರರಿಗೆ ಈತನು ಬಂದದ್ದು ಸೇರಲಿಲ್ಲವೆಂದು ಒಡೆದು ಕಾಣುತ್ತಿತು. ವಿಲಾಸ ಬಿಹಾರಿಯು ಒಮ್ಮೆಲೇ ಕೇಳಿದ:—

"ಮೊನ್ನೆ ಬಂದು ಮೈಲಿಯ ಹೆದರಿಕೆ ಹುಟ್ಟಿಸಿದವರು ನೀವೇ ಅಲ್ಲವೇ?"

'ಇಂತಹ ಅಪವಾದಕ್ಕೆ ಯಾರಿಂದಲೂ ಉತ್ತರಕೊಡುವುದು ಶಕ್ಯವಿದ್ದಿಲ್ಲ. ಈ ಪ್ರಶ್ನೆ ಕೇಳಿ ವಿಜಯೆ ಕಣ್ಣು ತೆರೆದಳು. ವಿಷಯಮಾತ್ರ ಆಕೆಗೆ ತಿಳಿಯಲಿಲ್ಲ. ಆಮೇಲೆ ಕೈ ಮುಂದೆಮಾಡಿ ಸ್ವಾಗತಿಸಿದಳು.

ಹತ್ತಿರ ಇನ್ನಾವ ಆಸರವೂ ಇರದ್ದರಿಂದ ಆಕೆಯ ಹಾಸಿಗೆಯ ಒಂದು ಬದಿಯಲ್ಲಿ ಕುಳಿತ.

"ನೀವು ನಿನ್ನೆ ಬಂದಿದ್ದರೆ ನನಗಿಷ್ಟು ಜ್ವರ ಬರುತ್ತಿರಲಿಲ್ಲ. ನಿನ್ನೆ ಇಡೀ ದಿನವೂ ಹಾದೀ ನೋಡಿದೆ."

ಈ ಮಾತನ್ನು ಕೇಳಿ ಬಿಹಾರಿ ಪಿತಾಪುತ್ರರಿಗೆ ತುಂಬಾ ಸಿಟ್ಟು ಬಂದಿತು. ಜ್ವರಬಂದಾಗ ತಮ್ಮ ಹೃದಯದ ಮಾತನ್ನೆಲ್ಲ ಹೇಳಿ ಬಿಡುತ್ತಾರೆಂದು ನರೇಂದ್ರನಿಗೆ ಗೊತ್ತು. ಆತ ಆಕೆಯನ್ನು ಸಂತೈಸಹತ್ತಿದ. "ಅದಕ್ಕಾಗಿ ಅಂಜುವಿರೇಕೆ? ಒಂದೆರಡೇ ದಿನದಲ್ಲಿ ಗುಣವಾದೀತು."

",ನೀವು ಮಾತ್ರ ನನಗೆ ಗುಣವಾಗುವವರೆಗೆ ಇಲ್ಲಿಯೇ ಇರಬೇಕು ಕಂಡಿರಾ? ನೀವು ಹೋದಿರೆಂದರೆ ನಾನು ಉಳಿಯುತ್ತೇನೋ ಇಲ್ಲೋ?" ಹೀಗೆ ಹೇಳುವಾಗಲೆಲ್ಲ ಆಕೆ ಆತನ ಕೈ ಬಿಟ್ಟಿರಲಿಲ್ಲ.

ನರೇಂದ್ರ ಉತ್ತರಕೊಡುವವನಿದ್ದ. ಹಸಿದ ಹುಲಿಯಂತಹ ಕಣ್ಣು ಬಿಟ್ಟು ಪಿತಾಪುತ್ರರು ಆತನೆಡೆಗೆ ನೋಡ ಹತ್ತಿದ್ದರು. ನರೇಂದ್ರನು ಅವರೆಡೆಗೆ ನೋಡಿದ.

೧೬

ನರೇಂದ್ರನಿಂದ ಉತ್ತರಕೊಡಲಾಗಲಿಲ್ಲ. ಹಿಂಸ್ರ ದೃಷ್ಟಿಯನ್ನು ಪಶುಗಳು ಸಹ ತಿಳಿಯಬಲ್ಲವು. ಆತನಿಗೆ ವ್ಯವಹಾರ ಜ್ಞಾನ ಇಲ್ಲವೆಂದು ತಿಳಿದುಕೊಂಡರೂ, ಈ ದೃಷ್ಟಿಯ ಅರ್ಥ ಅವನಿಗಾಗದೆ ಹೋಗಲಿಲ್ಲ. ಮೈಕ್ರೊಸ್ಕೋಪಿನ ಬೆಲೆ ಕೊಡುವ ನೆವದಿಂದ ಕರೆಸಿ ರಾಸಬಿಹಾರಿ ಸಾಕಷ್ಟು ಉಪದೇಶವನ್ನೂ ಮಾಡಿದ್ದ. ನಾನ್ನೂರು ರೂಪಾಯಿಯ ಮಾಲು ಇನ್ನೂರು ರೂಪಾಯಿಗೆ ಸಿಕ್ಕಿರುವಾಗ ಈ ಅಸಂತೋಷವೇಕೆ ಎಂದು ಊಹಿಸಲಾರದಾದ. ಇನ್ನು ಮೈಲಿಯ ಹೆದರಿಕೆ ಹುಟ್ಟಿಸಿದುದಕ್ಕಿರಬಹುದೇ?—ಅದಂತೂ ಇರಲಾರದು. ಹೀಗೆ ಯೋಚಿಸುತ್ತಿರುವಷ್ಟರಲ್ಲಿಯೇ ಇಣಿಕಿ ನೋಡುತ್ತಿರುವ ಕಾಲೀಪದನನ್ನು ಕಂಡು ವಿಲಾಸನು "ಏ ಸೂ—ಮಗನೇ? ಒಂದು ಖುರ್ಚಿ ತೆಗೆದುಕೊಂಡು ಬಾರೋ ಇಲ್ಲಿ" ಎಂದು ಕೂಗಿದ.

"ಇದು ರೋಗಿಯ ಕೋಣೆ. ಹೀಗೆ ಕಾತರನಾಗಬೇಡ. ತಾಳ್ಮೆಗೆಡುವುದು ತರವಲ್ಲ" ಎಂದು ತಂದೆ ಬುದ್ಧಿ ಹೇಳಿದ.

"ಇಂತಹ ಸಮಯದಲ್ಲಿ ತಾಳ್ಮೆಗೆಡದೆ ಏನು ಮಾಡಲಿ? ಸಭ್ಯ ಸ್ತ್ರೀಯೊಬ್ಬಳ ಮರ್ಯಾದೆ ಕಾಯುವುದು ನಮ್ಮ ಕೆಲಸ. ಆ ಕಳ್ಳ, ನೌಕರ ಎಲ್ಲಿಯವನನ್ನೋ ತಂದು ಹೀಗೆ ಹಾಸಿಗೆಯ ಬಳಿಯಲ್ಲಿ ಕೂಡ್ರಿಸಬಹುದೇ?"

ವಿಜಯೆ ಮುಖ ತಿರುವಿದಳು.

ಕಾಲಿಪದನು ತಂದಿಟ್ಟ ಖುರ್ಚಿಯಮೇಲೆ ನರೇಂದ್ರನು ಕುಳಿತು ಕೊಂಡ. ವಿಜಯೆ ಮುಖ ತಿರುವಿದುದನ್ನು ರಾಸಬಿಹಾರಿ ಲಕ್ಷಿಸಿದ್ದ. ಅದ ಕ್ಕಾಗಿ ಆತ ನಗುತ್ತ ನುಡಿದ "ಇದರಲ್ಲಿ ನಿನ್ನ ತಪ್ಪಿಲ್ಲವೆಂದು ಬಲ್ಲೆ. ಆದರೆ ಬೇಕೆಂತಲೇ ಎಲ್ಲರೂ ಅಪರಾಧಮಾಡುವದಿಲ್ಲವೆಂಬುದನ್ನೂ ನೀನು ಗಮನಿಸ ಬೇಕು. ಎಲ್ಲರೂ ಎಲ್ಲ ತರದ ರೀತಿ ರಿವಾಜು ಆಚಾರ ವ್ಯವಹಾರ ಕಲಿತಿದ್ದರೆ ಇಂತಹ ಪ್ರಶ್ನೆಯೇ ಉಪಸ್ಥಿತವಾಗುತ್ತಿದ್ದಿಲ್ಲ. ಆದುದರಿಂದ ಶಾಂತರಾಗಿ ಇಂತಹ ತಪ್ಪನ್ನು ಮನ್ನಿಸುವುದು ಮನುಷ್ಯನ ಕರ್ತವ್ಯ."

ಇದರಲ್ಲಿ ಯಾರ ತಪ್ಪೆಂದು ತಿಳಿಯಲು ಯಾರಿಗೂ ತಡವಾಗಲಿಲ್ಲ. 'ಅಲ್ಲ ಅಪ್ಪಾ, ಈ ಮನೆಯ ನೌಕರರಿಗಂತೂ ಎಳ್ಳಷ್ಟು ತಿಳವಳಿಕೆ ಇಲ್ಲ. ಇವರನ್ನೆಲ್ಲ ಹೊರಗೆ ಹಾಕಿದ ಹೊರತು ನಿದ್ರೆಬೀಳದು."

"ಯಾರಾದರೂ ಅಸ್ವಸ್ಥರೆಂದರೆ ನನ್ನಂತಹನಿಗೇ ದುಃಖವಾಗುತ್ತಿದೆ. ಅಂದಬಳಿಕ ವಿಲಾಸನದೇನು ತಪ್ಪು. ಅವನಿಗಂತೂ ಸಿಟ್ಟು ಬಂದಿತೆಂದರೆ ತೀರಿಯೇ ಹೋಯಿತು." ಎಂದು ಗೋಡೆಯನ್ನು ಉದ್ದೇಶಿದಂತೆ ಮಾಡಿ ರಾಸಬಿಹಾರಿ ನುಡಿದ.

ಇಲ್ಲಿಯ ತನಕ ನರೇಂದ್ರ ತೆಪ್ಪಗಿದ್ದ. ಆತ ನಡುವೆಯೇ "ನಾನು ಅಂತಹ ಅಂಜಿಕೆಯನ್ನೇನೂ ತೋರಿಸಿ ಹೋಗಿರಲಿಲ್ಲ" ಎಂದ.

"ಸುಳ್ಳು ಹೇಳುವಿರಾ? ಕಾಲೀಪದನು ಸಾಕ್ಷಿಗಿದ್ದಾನೆ" ಎಂದು ವಿಲಾಸ ನೆಲ ಅಪ್ಪಳಿಸಿದ.

"ಇಂತಹ ಕ್ಷುಲ್ಲಕ ಬೇನೆಗಾಗಿ ಹೀಗೆಲ್ಲ ಮಾಡಬೇಡ ವಿಲಾಸ. ಅವರೇ ಒಪ್ಪದ ಮೇಲೆ ಕಾಲೀಪದನ ಮೇಲೆ ವಿಶ್ವಾಸವೇ! ದುಃಖವೆಲ್ಲ ನಮ್ಮ ಸುಖಕ್ಕಾಗಿಯೇ ಬಂದಿರುತ್ತಿದೆ. ಒಂದು ವೇಳೆ ಅವರೇ ಭಯ ತೋರಿಸಿದ ರೆಂದು ತಿಳಿಯುವಾ. ಎಂತೆಂತಹ ಡಾಕ್ಟರರೇ ತಪ್ಪುವಾಗ, ಈ ಯುವಕರ ನೇನು ತಪ್ಪು? ಡಾಕ್ಟರರೇ, ಇದರಿಂದೇನೂ ಭಯವಿಲ್ಲವಷ್ಟೆ?"

"ನನ್ನಂತಹ ಬುದ್ಧಿಯಿಲ್ಲದ ಹುಡುಗ ಹೇಳುವುದರಿಂದೇನಾಗಬೇಕು, ಮಹಾಸ್ವಾಮಿ, ಒಳ್ಳೆಯ ಡಾಕ್ಟರರಿಗೆ ತೋರಿಸಿ ಅವರ ಸಲಹೆ ಪಡೆಯು ವುದು ಒಳಿತಲ್ಲವೇ?"

ಈ ಮಾತು ಕೇಳಿ ವಿಲಾಸ ಹೊಡೆಯಲಿಕ್ಕೆದ್ದ. "ನಾಲಿಗೆ ಬಿಗಿ ಹಿಡಿದು ಮಾತಾಡು. ಯಾರೊಡನೆ ಮಾತಾಡುತ್ತೀಯೆಂಬುದರ ಕಲ್ಪನೆಯಾದರೂ ಇದೆಯೇ? ಈ ಸ್ಥಳವಿಲ್ಲದಿದ್ದರೆ ನಿಮ್ಮ ಈ ತರದ ನೋಟಕ್ಕೆ........"

ಕಾಲುಕೆದರಿ ಜಗಳ ತೆಗೆಯುವ ವಿಲಾಸನ ರೀತಿಯನ್ನು ಕಂಡು ನರೇಂದ್ರ ಚಕಿತನಾದ. ತಾನು ಮಾಡುತ್ತಿರುವ ತಪ್ಪಾವುದೆಂಬುದೂ ಆತನಿಗೆ ತೋಚಲಿಲ್ಲ. ಇವನ ಹೊಟ್ಟೆಯುರಿ ಏಕೆಂಬುದು ಆತನಿಗಿನ್ನೂ ತಿಳಿದಿರಲಿಲ್ಲ. ವಿಜಯೆ ವಿಲಾಸರ ಸಂಬಂಧವನ್ನು ಜನರು ಆಡಿಕೊಳ್ಳುತ್ತಿದ್ದುದೇನೋ ನಿಜ. ಆದರೆ ಕೀಟಾಣುಗಳ ರಚನೆಯ ರೀತಿಯಲ್ಲಿ ಮಗ್ನನಾದ ನರೇಂದ್ರನಿಗೆ ಅವುಗಳ ಗೊಡವೆ ಯೇಕೆ? ಪ್ರತಿಷ್ಠಾಪನೆಯ ದಿನವೂ ಆತ ಇಲ್ಲಿರದೆ ಕಲಕತ್ತೆಗೆ ಹೋಗಿದ್ದ. ಬಿಹಾರಿ ಪಿತಾ ಪುತ್ರರ ಮಾತಿನ ಧಾಟಿಯಲ್ಲಿ ಎನೋ ವ್ಯಂಗ ಅಡಗಿದೆಯೆಂದು ಊಹಿಸುತ್ತಿದ್ದನಾದರೂ, ಯಾವುದಾದರೊಂದು ನಿರ್ಣಯಕ್ಕೆ ಬರಲು ಆತನಿಗೆ ಸಮಯವಿದ್ದಿಲ್ಲ. ಆಗಲೇ ವಿಜಯೆ ವ್ಯಥಿತಳಾಗಿ ನುಡಿದಳು. "ನಾನು ಬದುಕಿದ್ದಷ್ಟು ದಿನ ನಿಮ್ಮ ಉಪಕಾರ ಮರೆಯಲಾರೆ. ಬೇರೊಬ್ಬ ಡಾಕ್ಟರರಿಂದಲೇ ನನ್ನ ಚಿಕಿತ್ಸೆಯಾಗಬೇಕೆಂದು ಇವರು ನಿರ್ಧರಿಸಿದ್ದಾರೆ. ಅದಕ್ಕಾಗಿ ಸುಮ್ಮನೆ ಅಪಮಾನವನ್ನೇಕೆ ಸಹಿಸುವಿರಿ? ಆದುದರಿಂದ ದಯಾಲು ಬಾಬುವನ್ನು ಮಾತ್ರ ಮರೆಯದೆ ನೋಡಿ ಹೋಗಿ. ಇದೇ ನನ್ನ ವಿನಂತಿ" ಎಂದಳು.

"ನೀವು ಕರೆಯ ಕಳುಹಿದವರನ್ನು ಯಾರು ತಾನೇ ಅಪಮಾನ ಮಾಡುವರು?" ರಾಸಬಿಹಾರಿ ನುಡಿದ.

ನಂತರ ಎಷ್ಟೋ ವೇದಾಂತದ ಮಾತು ಹೇಳಿ, ಆಕೆಯ ಸೀಕು ಕಂಡು ಕಿಂಕರ್ತವ್ಯ ವಿಮೂಢನಾಗಿ ನರೇಂದ್ರನು ಈ ರೀತಿ ಹೇಳಿರಬೇಕೆಂದು ಪ್ರತಿಪಾದಿಸಿದ. ನರೇಂದ್ರ ತನ್ನ ಬೇಗು ಹಿಡಿದು ಹೊರಟ. ಆಗ ರಾಸಬಿಹಾರಿಯು "ಡಾಕ್ಟರರೇ ನಿಮ್ಮೊಡನೆ ತುಸು ಮಾತನಾಡುವದಿದೆ" ಎಂದು ಅವನ ಹಿಂದಿಂದೇ ಹೊರಟ.

ಅವರಿಬ್ಬರೂ ಇನ್ನೊಂದು ಕೋಣೆಯಲ್ಲಿ ಹೋಗಿ ಕುಳಿತರು. "ಮಗೂ ಜನರ ಮುಂದೆ ನಿನ್ನನ್ನು ಡಾಕ್ಟರನೆಂದು ಕರೆಯಲಿ, ಏನೇ ಕರೆ

ಯಲಿ. ನೀವೆಲ್ಲ ನಮ್ಮ ಮಿತ್ರರ ಮಕ್ಕಳೇ ಸರಿ. ವಸವೀರ, ಜಗದೀಶ ಇಬ್ಬರೂ ನನ್ನೊಬ್ಬನನ್ನೇ ಬಿಟ್ಟು ನಡೆದರು. ನಾವೆಲ್ಲ ಎಷ್ಟು ಅನ್ಯೋನ್ಯ ವಾಗಿದ್ದೆವು. ನೀನು ಯಂತ್ರವನ್ನು ಮಾರಿದುದು ಮಾತ್ರ ನನ್ನ ಮನಸ್ಸಿಗೆ ಬಂದಿರಲಿಲ್ಲ. ಏನೇ ಆಗಲಿ. ವಿಜಯೆಗೆ ಬೇಕೆಂದ ಮೇಲೆ ಒಂದು ನಿಮಿಷವೂ ತಡಮಾಡದೆ ಹಣ ಕೊಡುವುದು ನನ್ನ ಕರ್ತವ್ಯವೆಂದು ಭಾವಿಸಿ ಕೊಂಡೆ. ಎಷ್ಟೆಂದರೂ ನಮ್ಮ ಜಗದೀಶನ ಮಗನಲ್ಲವೇ ? "

ಹಣ ಕೊಡುವಾಗ ರಾಸಬಿಹಾರಿ ಹೇಳಿದ ಮಾತೆಲ್ಲ ಸ್ಮರಣೆಗೆ ಬಂದಿತು. " ಅದರ ಹಣ ಕೊಡುವ ಇಚ್ಛೆ ತಮಗಿರಲಿಲ್ಲವೇ ? "

" ಹಾಗಲ್ಲ, ನರೇಂದ್ರ. ಅದರ ವಿಚಾರ ನಿನಗೆ ತಿಳಿಯದು. ಇರಲಿ. ವಿಲಾಸನ ಇಂದಿನ ನಡತೆಯಿಂದ ನನಗಾದ ದುಃಖ ಅಷ್ಟಿಷ್ಟಲ್ಲ. ಆದರೆ ಯಂತ್ರ ಕೊಳ್ಳುವಾಗ ವಿಜಯೆ ವಿಲಾಸನೊಡನೆ ಒಂದು ಮಾತಾದರೂ ಕೇಳಬೇಕಿತ್ತು. ಆಕೆಗೆ ಸ್ವಲ್ಪ ತಲೆನೋಯಿಸುತ್ತಿದೆಯೆಂದರೆ ಆತನಿಗಾಗುವ ವೇದನೆ ಯೆಷ್ಟೆಂಬುದನ್ನು ನೀನೇ ನೋಡಿದೆಯಷ್ಟೇ. ಆಕೆಯ ಸಂರಕ್ಷಣದ ಎಲ್ಲ ಭಾರವೂ ಆತನನ್ನೇ ಕೂಡಿದೆ. ವೈದ್ಯರನ್ನು ಆರಿಸುವುದು ಅನುಪಾನದ ವ್ಯವಸ್ಥೆ ಮಾಡುವುದು-- ಇವೆಲ್ಲ ಆತನಿಗೇ ಸೇರಿದ್ದು. ಅವನಪ್ಪಣೆ ಇಲ್ಲದೆ ಒಂದು ಎಲೆ ಸಹ ಅಲುಗದು. ನಿನ್ನನ್ನು ಕರೆಸುವದಾದರೂ ಆಕೆ ಆತನ ಸಲಹೆ ಪಡೆಯಬೇಕಿತ್ತು. ಅವರ ಲಗ್ನ ಇದೇ ವೈಶಾಖದಲ್ಲಿ ಆಗಲಿದೆ. ನೀನು ಎಲ್ಲೇ ಇದ್ದರೂ, ಆ ಕಾಲಕ್ಕೆ ಮಾತ್ರ ತಪ್ಪದೇ ಬಾ "

" ಒಳಿತು ಎಂದ. ಇನ್ನೇನೂ ನರೇಂದ್ರ ಮಾತಾಡಲಿಲ್ಲ.

ರಾಸ ಬಿಹಾರಿ ಬಹಳಷ್ಟು ಮಾತಾಡಿದ. ಇದೆಲ್ಲ ದೇವರ ಇಚ್ಛೆ ಯೆಂದೂ -- ಈ ವಿವಾಹ ಅವರ ಜನ್ಮ ಕಾಲದಲ್ಲೇ ಸ್ಥಿರವಾಗಿತ್ತೆಂದೂ, ಅವರ ತಂದೆ ತನಗೆ ಹೇಳಿದುದನ್ನೆಲ್ಲ ಉಪ್ಪುಕಾರ ಹಚ್ಚಿ ಹೇಳಿ " ಒಳ್ಳೇದು ಈಗ ಕಲಕತ್ತೆಯಲ್ಲಿಯೇ ಇರುವಿರಾ ? ಎಲ್ಲಿಯಾದರೂ ನೌಕರೀ ಸಿಗ ಬಹುದೇ ? "

" ಅಹುದು. ವಿಲಾಯತಿ ದವಾಖಾನೆ ಯಲ್ಲೊಂದು ಸಣ್ಣ ಕೆಲಸ ಸಿಕ್ಕದೆ. "

"ಒಳ್ಳೇದಾಯಿತು. ಒಳ್ಳೇದಾಯಿತು ಪ್ರಾಮಾಣಿಕತನದಿಂದ ಇದ್ದರೆ ಬೇಕಷ್ಟು ಗಳಿಸಬಹುದು" ಈಗ ಪಗಾರೆಷ್ಟು?"

"ಇನ್ನು ಮುಂದೆ ಹೆಚ್ಚಾಗಬಹುದೋ ಏನೋ? ಈಗ ನಾನ್ನೂರು ರೂಪಾಯಿ ಕೊಡುತ್ತಾರೆ"

"ನಾನ್ನೂರು!" ಆತನ ಮೋರೆ ವಿವರ್ಣವಾಯಿತು. "ಹೀಗೋ, ಹಾಗಾದರೆ ಒಳಿತಾಯಿತು. ಕೇಳಿ ತುಂಬಾ ಸಂತೋಷವಾಯಿತು"

ಹೊತ್ತು ಬಹಳವಾದುದರಿಂದ ನರೇಂದ್ರ ಎದ್ದ. ಅಲ್ಲದೆ ದಯಾಲ ಬಾಬುವನ್ನೂ ನೋಡುವದಿತ್ತು. "ಪರೇಶ, ಹೇಗಿದ್ದಾನೆ?" ಎಂದ.

"ಅವನನ್ನು ಹಳ್ಳಿಗೆಕಳಿಸಲಾಗಿದೆ. ಹೇಗಿದ್ದಾನೆಂದು ಹೇಗೆ ಹೇಳಲಿ?"

ಇಬ್ಬರೂ ಕೋಣೆಯಿಂದ ಹೊರಬಿದ್ದರು. ಆದರೆ ರಾಸಬಿಹಾರಿಗೆ ಮೇಲೆ ಹೋಗುವದಿತ್ತು. ಮಗ ದಾರಿ ಕಾಯುತ್ತಿದ್ದ. ಮುಂದಿನ ವ್ಯವಸ್ಥೆ ಮಾಡುವದೂ ಇತ್ತು. ನರೇಂದ್ರ ಮಾತ್ರ ಬೀಸುಗಾಲಿನಿಂದ ಹೆಜ್ಜೆ ಇಕ್ಕುತ್ತ ನಡೆದೇ ಬಿಟ್ಟ.

ಸ್ನಾನವಿಲ್ಲ, ಊಟವಿಲ್ಲ, ತಲೆಯ ಮೇಲೆ ಕುಕ್ಕುವ ಸೂರ್ಯ— ಈ ಪರಿಯಿಂದ ನರೇಂದ್ರ ತೀವ್ರವಾಗಿ ದಿಘಡಾ ಗ್ರಾಮದೆಡೆಗೆ ಹೋಗುತ್ತಿದ್ದ. ಆದರೆ ಆತನ ಮನಸ್ಸಿಗೇಕೋ ನೆಮ್ಮದಿಯಿಲ್ಲ. ಅಂತೂ ಕೆಲ ಹೊತ್ತಿನಲ್ಲಿ ಮನೆ ಮುಟ್ಟಿದ.

೧೭

ಕಾಗದದ ಮೇಲೆ ತನ್ನ ಹೆಸರನ್ನೂ, ತನ್ನ ಡಿಗ್ರಿಯನ್ನೂ ಬರೆದು ನರೇಂದ್ರ ಕಳಿಸಿಕೊಟ್ಟ. ಅದನ್ನೋದಿ ದಯಾಲನಿಗೆ ಗಾಬರಿಯಾಯಿತು. ಇಂತಹ ಡಾಕ್ಟರನು ತನ್ನ ಮನೆಯವರೆಗೆ ನಡೆಯುತ್ತ ಬರುವಂತೆ ಮಾಡಿದುದು ಪ್ರಮಾದವಾಯಿತೆಂದು ಭಾವಿಸಿದ. ಅಲ್ಲದೆ ಆ ಡಾಕ್ಟರನನ್ನೇ ಹೊರ ಹಾಕಿ ತಾನು ಆ ಮನೆಯಲ್ಲಿದ್ದನೆಂಬ ಎಚ್ಚರ ಬಂದೊಡನೆ ಆತನಿಗೆ ತುಂಬಾ ನಾಚಿಕೆಯಾಯಿತು. ತುಸುಹೊತ್ತಿನಲ್ಲಿಯೇ, ಗೌರವರ್ಣದ, ದೀರ್ಘಕಾಯದ ಮನುಷ್ಯನೊಬ್ಬನನ್ನು ಕಂಡು ಅವಾಕ್ಕಾಗಿ ದಿಟ್ಟಿಸ ಹತ್ತಿದ. ಆತನಿಗೆ ತನ್ನ ಎಂತಹ ರೋಗವಿದ್ದರೂ ಈತನ ಮುಂದೆ ನಿಲ್ಲದಾರದೆಂದು ವಿಶ್ವಾಸ ಬಂದಿತು. ಅಸ್ವಸ್ಥಳಿದ್ದ ವಿಜಯೆಯೇ ಈತನನ್ನು ತನ್ನಲ್ಲಿಗೆ ಕಳಿಸಿರುವಳೆಂದು

ತಿಳಿದಮೇಲಂತೂ ಕೃತಜ್ಞತೆಯಿಂದ ಆತನ ಕುತ್ತಿಗೆ ಉಬ್ಬಿಬಂದಿತು, ಕೆಲ ಹೊತ್ತಿನಲ್ಲಿಯೇ ಅವರು ತುಂಬ ವಿಶ್ವಾಸದಿಂದ ಮಾತನಾಡತೊಡಗಿದರು. ನರೇಂದ್ರ ಈಹೊತ್ತಿನ ಘಟನೆಯಿಂದಾಗಿ ಉದಾಸೀನನಾಗಿದ್ದ. ಆದರೆ ಮುದುಕನ ಸಂತೋಷ, ಸೌಹಾರ್ದತೆ, ಅಂತರ್ಯದ ಪಾವಿತ್ರ್ಯ-ಇವುಗಳಿಂದ ಆತನ ಉದಾಸೀನತೆ ಎಷ್ಟೋ ಪಾಲು ಹಿಮ್ಮೆಟ್ಟಿತು. ದಯಾಲನ ಸರ್ವಧರ್ಮ ಸಮದೃಷ್ಟಿ ಆತನ ಮೇಲೆ ತುಂಬ ಪರಿಣಾಮವನ್ನುಂಟುಮಾಡಿತು. ರಾಸಬಿಹಾರಿ, ವಿಲಾಸಬಿಹಾರಿಯವರನ್ನೂ ಆತ ಬಾಯ್ತುಂಬ ಹೊಗಳಿದ. ಆತನ ದೃಷ್ಟಿಯಲ್ಲಿ ಯಾರೂ ಕೆಟ್ಟವರಿರಲಿಲ್ಲ. ಈ ಸಮಭಾವವನ್ನು ಕಂಡು ನರೇಂದ್ರ ಮನವಾರೆ ನಕ್ಕ. ಬರುವ ವೈಶಾಖದಲ್ಲಿ ವಿಜಯೆಯ ಲಗ್ನ-ಅದಕ್ಕೆ ತಾನೇ ಪುರೋಹಿತನೆಂಬುದನ್ನೂ ಆತ ಹೇಳಲು ಮರೆಯಲಿಲ್ಲ.

ಆದರೆ ಕೊನೆಯ, ವಿವಾಹದ ಚರ್ಚೆಯಿಂದ ಶ್ರೋತೃವಿನ ಮುಖವು ವಿವರ್ಣವಾಗುತ್ತ ನಡೆದಿತ್ತು.

ಅಲ್ಲಿಯೇ ಊಟ ತೀರಿಸಿ ಹೋಗಲು ದಯಾಲನು ಆಗ್ರಹಪಡಿಸಿದರೂ, ನರೇಂದ್ರನು ಒಪ್ಪಲಿಲ್ಲ. ಸುಮಾರು ಒಂದೂವರೆ ತಾಸಿನ ನಂತರ ಅಲ್ಲಿಂದ ಬೀಳ್ಕೊಂಡು ನಡೆದ. ಈಗ ಮಾತ್ರ ತನ್ನ ಮನಸ್ಸು ಈ ರೀತಿ ವಿಹ್ವಲವಾಗಲು ಕಾರಣವೇನೆಂದು ತಿಳಿದುಕೊಂಡ. ನದಿ ದಾಟಿ ಹಿಂತಿರುಗಿ ನೋಡುವಾಗ ಅದೇ ಜಮೀನುದಾರನ ಮನೆ ಕಣ್ಣಿಗೆ ಬಿತ್ತು. ಕಣ್ಣಿನಲ್ಲಿ ಕಂಬನಿ ದುಂಬಿತು. ಆತ ನೆಟ್ಟಗೆ ರೇಲ್ವೆ ಸ್ಟೇಶನ್ನಿಗೆ ತೀವ್ರವಾಗಿ ನಡೆಯಹತ್ತಿದ. ಇಂದಿನಂತಹ ಬಲವಾದ ಪೆಟ್ಟು ಬಿದ್ದಿರದಿದ್ದರೆ ತನ್ನ ಮನದೊಲವು ಆತನಿಗೆ ತಿಳಿಯುತ್ತಿತ್ತೋ ಇಲ್ಲವೋ? ಇಲ್ಲಿಯವರೆಗೂ ಆತ ನೆನಸಿದ್ದು ವಿಜ್ಞಾನದ ಆರಾಧನೆ. ಇದೊಂದನ್ನು ಬಿಟ್ಟು ಇನ್ನಾವುದಕ್ಕೂ ತನ್ನ ಹೃದಯದಲ್ಲಿ ಎಂದಿಗೂ ಸ್ಥಾನವಿಲ್ಲವೆಂದು ಆತ ನಂಬಿದ್ದ. ಉಳಿದೆಲ್ಲ ಆಶೆ ಆಕಾಂಕ್ಷೆಗಳನ್ನೂ ಆತ ಕಡೆಗಣಿಸಿದ್ದ. ಆದರೆ ಈ ರೀತಿ ತನ್ನ ಮನವು ಇನ್ನಾರಿಗೋ ಮಾರಲ್ಪಟ್ಟಿದೆಯೆಂದು ತಿಳಿದು ಆತನಿಗೇ ನಾಚಿಕೆಯಾಯಿತು. ತನಗಾದ ಇಂದಿನ ಅವಮಾನ ಸಹಜವಾದದ್ದೆಂದು ತಿಳಿದ. ಈ ಒಂದು ಹೆಂಗುಸಿನ ಮಾತಿಗಾಗಿ ತಾನೆಷ್ಟು ದೂರದಿಂದ ನಡೆದು ಬಂದೆ?— ಇಂತಹ ವಿಕಾರವಶನಿಗೆ ಇಂದಿನ ಶಿಕ್ಷೆ ಯೋಗ್ಯವಾದುದೆಂದು ಆತನ ಮನಸ್ಸು ಹೇಳಿತು.

ಸ್ಟೇಶನ್ನಿನಲ್ಲಿ ಕಾಲೀಪದನು ಮೈಕ್ರೋಸ್ಕೋಪನ್ನು ಹಿಡಿದು ನಿಂತಿದ್ದ. ಆತ ಸಮೀಪಕ್ಕೆ ಬಂದು "ಒಡತಿಯರು ನಿಮಗೆ ಕೊಡಲು ಕೊಟ್ಟಿದ್ದಾರೆ" ಎಂದ.

"ಯಾಕೆ?" ನರೇಂದ್ರನ ಸ್ವರದಲ್ಲಿ ತೀವ್ರತೆ ಇತ್ತು.

ಅದರ ಕಾರಣ ಕಾಲೀಪದನಿಗೆ ಗೊತ್ತಿರಲಿಲ್ಲ. ಈ ವಸ್ತುವಿನ ಸಲುವಾಗಿಯೇ ಇಷ್ಟೆಲ್ಲ ಗೊಂದಲ ನಡೆದಿದೆ ಯೆಂದು ಆತ ಅರಿತಿದ್ದ. ಆತ ಎಲ್ಲವನ್ನೂ ಅರಿತವನಂತೆ "ತಾವೇ ತಿರುಗಿ ಕೇಳಿದ್ದಿರಲ್ಲ!" ಎಂದ.

ನರೇಂದ್ರ ಮನದಲ್ಲಿಯೇ ಸಿಡಿಮಿಡಿಗೊಂಡ. "ಇಲ್ಲ. ನಾನು ವಾಪಸು ಕೇಳಿರಲಿಲ್ಲ. ನನ್ನ ಹತ್ತರ ಕೊಡಲು ಹಣವಿಲ್ಲ." ಎಂದ.

ಇದು ಸಿಟ್ಟಿನ ಮಾತೆಂದು ಕಾಲೀಪದ ಗ್ರಹಿಸಿದ. ಹಣದ ಬಗ್ಗೆ ವಿಜಯೆ ಉದಾರವಾಗಿದ್ದಾಳೆಂದು ಆಕೆಯ ಆಚರಣೆಯಿಂದ ಆತನಿಗೆ ಗೊತ್ತಿದ್ದಿತು. ಅದಕ್ಕಾಗಿ ಆತ ತುಸು ನಕ್ಕು "ಓಹೋ, ಅದೇನು ದೊಡ್ಡದು? ಒಡತಿಗೆ ಇನ್ನೂರು ರೂಪಾಯಿ ಯಿಂದೇ ನಾಗಬೇಕಾಗಿದೆ? ಈಗ ತೆಗೆದು ಕೊಂಡು ಹೋಗಿ, ಹಣ ಸಿಕ್ಕಾಗ ಕಳಿಸಬಹುದು" ಎಂದ.

"ಇಲ್ಲ, ಕಾಲೀಪದ, ಅದನ್ನು ತೆಗೆದುಕೊಂಡೇ ಹೋಗು. ನನಗದರ ಅವಶ್ಯಕತೆ ಇಲ್ಲ. ಇನ್ನೂರು ರೂಪಾಯಿಗಾಗಿ ನಾನ್ನೂರು ರೂಪಾಯಿ ತೆರಲು ನಾನು ತಯಾರಿಲ್ಲ."

"ಇಲ್ಲ, ಡಾಕ್ಟರ ಸಾಹೇಬರೇ— ತಾವು ಸಂಗಡ ತೆಗೆದುಕೊಂಡೇ ಹೋಗಿ. ನಾನು ಗಾಡಿಯಲ್ಲಿಟ್ಟೇ ಹೋಗುವೆ. ನೀವೇನು ಬೇಸರ ಪಡಬೇಡಿ. ಒಡತಿಯರಿಗೆ ಗುಣವಾದ ಮೇಲೆ ಅವರು ಒಂದು ವೇಳೆ ರೂಪಾಯಿ ಬಿಟ್ಟರೂ ಬಿಡಬಹುದು."

ಈ ಸಂಕೇತದಿಂದ ಆತನಿಗೆ ಸಿಟ್ಟು ಹೆಚ್ಚಾಯಿತು. "ನಿಜ, ನಿಜ, ಆಕೆ ಕರೆಸಿದಳು. ವಿಲಾಸ ಅಪಮಾನ ಮಾಡಿದ. ಇದೂ ಆಕೆಯದೇ ಕೃಪೆ."

ಪ್ಲ್ಯಾಟಫಾರ್ಮಿನ ಮೇಲೆ ಇನ್ನೂ ಜನವಿದ್ದುದರಿಂದ ನರೇಂದ್ರ ಸಂಭಾಳಿಸಿಕೊಂಡ. ಹಾದಿಯ ಕಡೆಗೆ ಕೈಮಾಡಿ "ಇದನ್ನು ನನ್ನೆದುರಿನಿಂದ ತೆಗೆದುಕೊಂಡು ಹೋಗು" ಎಂದವನೇ ಇನ್ನೊಂದು ಬದಿಗೆ ಮೋರೆ ಮಾಡಿ

ಹೊರಟ. ಕಾಲೀಪದನು ಕಟ್ಟಿಗೆಯ ಪ್ರತಿಮೆಯಂತೆ ನಿಂತುಬಿಟ್ಟ. ಆತನಿಗೆ ಇನ್ನೇನು ಮಾಡಬೇಕೆಂಬುದೇ ಬಗೆ ಹರಿಯಲಿಲ್ಲ. ಸುಮಾರು ೧೫ ನಿಮಿಷ ದಲ್ಲಿ ಗಾಡಿ ಬಂದಿತು. ನರೇಂದ್ರ ಕುಳಿತ. ಆಗ ಕಾಲೀಪದನು ಹತ್ತಿರಹೋಗಿ "ಡಾಕ್ಟರ ಸಾಹೇಬ" ಎಂದು ಕರೆದ.

ನರೇಂದ್ರ ಎಲ್ಲಿಯೋ ನೋಡುತ್ತಿದ್ದ, ತಿರುಗಿ ನೋಡಿದಾಗ ಕಾಲಿಪದನ ಮಲಿನ ಮುಖ ಕಾಣಿಸಿತು. ಸುಮ್ಮನೆ ಸಿಟ್ಟಿಗೆದ್ದುದಕ್ಕಾಗಿ ಪಶ್ಚಾತ್ತಾಪ ಪಟ್ಟು, ಆತನೂ ಮೆತ್ತಗಾಗಿದ್ದ. ಅದಕ್ಕಾಗಿ ತುಸು ನಕ್ಕು "ಈಗ ಏಕೆ ಬಂದೆಯೋ ?" ಎಂದು ಕೇಳಿದ.

ಸಣ್ಣ ಕಾಗದ, ಪೆನ್ಸಿಲಿನ ತುಂಡೊಂದನ್ನು ತೆಗೆದು "ತಮ್ಮ ಪತ್ತೆ ಕೊಟ್ಟರೆ?"

"ನಿನಗೇಕೋ ನನ್ನ ಪತ್ತೆ? ತೆಗೆದುಕೊಂಡೇನು ಮಾಡುವಿ ?"

"ನನಗಲ್ಲ. ಒಡತಿ ಹೇಳಿದ್ದಳು."

ಒಡತಿಯ ಹೆಸರು ಕೇಳಿದೊಡನೆಯೇ ಆತನಿಗೆ ಮತ್ತೆ ಸಿಟ್ಟೇರಿತು. "ಹೋಗೋ, ಇಲ್ಲಿಂದ"

ಕಾಲೀಪದ ಹಿಮ್ಮೆಟ್ಟಿದ. ಸಿಳ್ಳು ಬಾರಿಸಿತು. ಗಾಡಿ ಹೊರಟಿತು.

ಕಾಲೀಪದ ಮನೆಗೆ ಹೋಗಿ ನಡೆದ ವೃತ್ತಾಂತ ಉಸುರಿದ.

ವಿಜಯೆಯಲ್ಲಿ ವಿಸ್ಮಯ ವಾಗಲೀ, ವೇದನೆಯಾಗಲೀ, ಕಂಡು ಬರ ಲಿಲ್ಲ. "ಆತನ ಸಿಟ್ಟು ಎಂತಹದಪ್ಪ ! ಪತ್ತೆ ಕೇಳಿದೊಡನೆ ಮೈಮೇಲೆಯೇ ಬಂದ." ಈಗಲೂ ವಿಜಯೆ ಉತ್ತರ ಗೊಡಲಿಲ್ಲ.

ಆಕೆಯಲ್ಲಾವ ಪರಿವರ್ತನೆಯನ್ನೂ ಕಾಣದೆ ಇವೆಲ್ಲ ಬೇಕೆಂತಲೇ ಮಾಡಿದ್ದಳೆಂದು ತಿಳಿದು ಕಾಲೀಪದ ಸುಮ್ಮನಾದ. ಸಾವಕಾಶ ಆ ಕೋಣೆ ಯಿಂದ ಹೊರಬಿದ್ದ.

## ೧೮

೪ ದಿನದಲ್ಲಿ ವಿಜಯೆಯ ಜ್ವರ ವಾಸಿಯಾದರೂ ಅಶಕ್ತತೆ ಇತ್ತು. ವಿಲಾಸ ಒಳ್ಳೊಳ್ಳೇ ಡಾಕ್ಟರರಿಂದ ಅನುಪಾನ ನಡೆಸುತ್ತಿದ್ದರೂ ಅಶಕ್ತತೆ ದಿನದಿನಕ್ಕೆ ಬೆಳೆಯುತ್ತಲಿತ್ತು. ಇತ್ತ ಫಾಲ್ಗುಣ ಕಳೆಯುತ್ತ ಬಂದಿತ್ತು. ನಡುವೆ ಒಂದೇ ತಿಂಗಳು ಬಾಕಿ. ಮೊದಲ ವಾರದಲ್ಲಿಯೇ ವಿವಾಹ ಮುಗಿಸ

ಬೇಕೆಂದು ರಾಸಬಿಹಾರಿ ಸಂಕಲ್ಪಿಸಿದ್ದ. ಆದರೆ ವಧುವಿನ ಸ್ಥಿತಿ ನೋಡಿ ದಿನಕ್ಕೊಮ್ಮೆ ಉಸಿರುಗರೆದು ಹೋಗುತ್ತಿದ್ದ. ಪಥ್ಯ ಉಪಚಾರದಲ್ಲಾವ ತ್ರುಟಿಯೂ ಇಲ್ಲ. ಆದರೆ ಇದೇನು ಹೀಗೆ ಎಂಬುದೇ ಅವರ ಒಡೆಯಲಾರದ ಒಗಟು. ಮೈಕ್ರೊಸ್ಕೋಪಿನ ಘಟನೆಯು ಉಪ್ಪು ಕಾರ ಬೆರೆತು ಹೇಗೆ ಹೇಗೋ ಅವರ ಕಿವಿಗೆ ಬಿದ್ದಿತ್ತು. ಅದನ್ನು ಕೇಳಿ ವಿಲಾಸನಿಗೆ ಸಂತೋಷವಾಯಿತು; ಆದರೆ ರಾಸಬಿಹಾರಿಗೆ ಅಷ್ಟೇ ದುಃಖವಾಯಿತು. ಈ ಸುದ್ದಿಯಿಂದ ವಿಜಯೆಯ ಮೇಲೆ ಕೆಡಕು ಪರಿಣಾಮವಾದೀತೆಂದು ಆತ ಹೆದರಿದ. ವಿಲಾಸ ಯಾರನ್ನು ಉಪೇಕ್ಷಿಸಿದರೂ ತಂದೆಯನ್ನು ಉಪೇಕ್ಷಿಸುವಷ್ಟು ಧೈರ್ಯವಿರಲಿಲ್ಲ. ಅಲ್ಲದೆತಂದೆಯ ಬುದ್ಧಿ ಮತ್ತೆಯ ಬಗ್ಗೂ ಅವನಿಗೆ ಗೌರವವಿತ್ತು.. ಆದರೆ ಈಗ ಆತನ ತಾಳ್ಮೆ ಮೀರಿತ್ತು. ಒಂದು ಕ್ಷುಲ್ಲಕ ಕಾರಣಕ್ಕಾಗಿ ಕಾಲೀಪದನನ್ನು ಕೆಲಸದಿಂದ ತೆಗೆದು ಹಾಕಿದ.

ಪ್ರಾತಃಕಾಲ ಹಾಗೂ ಸಾಯಂಕಾಲಗಳಲ್ಲಿ ತಿರುಗಾಡಲು ವೈದ್ಯ ಸಲಹೆ ಕೊಟ್ಟಿದ್ದ. ಆ ದಿನ ನದೀ ತೀರದಲ್ಲಿ ಅಡ್ಡಾಡಿ ತಿರುಗಿ ಬಂದೊಡನೆಯೇ ಕಾಲೀಪದನು ಕಣ್ಣಲ್ಲಿ ನೀರು ತಂದು "ಅಮ್ಮಾ, ಸಣ್ಣ ರಾಯರು ನನಗೆ ತೆಗೆದು ಹಾಕಿದರು" ಎಂದನು.

ವಿಜಯೆಗೆ ಆಶ್ಚರ್ಯವಾಯಿತು. "ಯಾಕೆ ?" ಎಂದಳು.

ಆತ ಅಳುತ್ತಳುತ್ತಲೇ ನುಡಿದ. "ಅಮ್ಮಾ ರಾಯರು ಸತ್ತು ಸ್ವರ್ಗಕ್ಕೆ ಹೋದರು. ಅವರಿಂದ ಒಮ್ಮೆಯೂ ಹೇಳಿಸಿಕೊಂಡಿರಲಿಲ್ಲ." ಹೀಗೆ ಹೇಳುತ್ತ ಹೇಳುತ್ತ ಕಣ್ಣನ್ನೊರಸಿಕೊಳ್ಳಹತ್ತಿದ. "ನಾನೇನು ಅಪರಾಧ ಮಾಡಿಲ್ಲ ಅಮ್ಮಾ, ಆದರೆ ನನ್ನನ್ನು ಕಂಡರೇ ಸಣ್ಣ ರಾಯರಿಗಾಗದು. ಡಾಕ್ಟರರಿಗೆ ಮೈಕ್ರೋಸ್ಕೋಪು ಮುಟ್ಟಿಸಲು ಹೋದುದನ್ನು ನಾನಾಗಿ ಹೇಳಿರಲಿಲ್ಲ" ಇದೇ ಆತ ಹೇಳಿದುದರ ಸಾರಾಂಶವಾಗಿತ್ತು.

ವಿಜಯೆ ಸುಮ್ಮನೆ ಕುಳಿತಳು. "ಕೊನೆಗೊಮ್ಮೆ" ಅವರೆಲ್ಲಿ? ಎಂದು ಕೇಳಿದಳು.

"ಆಫೀಸಿನಲ್ಲಿ ಕೂತು ಲೆಖ್ಖ ಪತ್ರ ನೋಡುತ್ತಿದ್ದಾರೆ"

"ಈಗ ಹೋಗು, ಕೆಲಸ ಮಾಡು, ಮುಂದೆ ನೋಡುವಾ." ಎಂದು ಹೊರಟು ಹೋದಳು. ಸುಮಾರು ಒಂದು ತಾಸಿನ ಮೇಲೆ ಬಂದು ನೋಡಲು ಆಫೀಸಿನಲ್ಲಿ ವಿಲಾಸನಿರಲಿಲ್ಲ.

ದಯಾಲನಿಗೆ ಗುಣವಾಗಿ ನಿಯಮಿತ ರೀತಿಯಿಂದ ತನ್ನ ಕೆಲಸ ನೋಡಿಕೊಂಡಿದ್ದ. ದಿನಾಲು ಸಂಜೆಗೆ ಆತನೊಡನೆ ಮಾತಾಡಿ, ಒಮ್ಮೊಮ್ಮೆ ಆತನನ್ನು ತುಸು ದೂರದ ವರೆಗೆ ಕಳುಹಿಸಿಕೊಟ್ಟು ಬರುತ್ತಿದ್ದಳು.

ನರೇಂದ್ರನ ಬಗ್ಗೆ ದಯಾಲನ ಸದಭಿಪ್ರಾಯವಿತ್ತು. ಬಾಯಿತುಂಬಾ ಆತನನ್ನು ಹೊಗಳುತ್ತಿದ್ದ. ಅದನ್ನು ಕೇಳುತ್ತಿದ್ದಳು ಅಷ್ಟೇ. ಆದರೆ ಅದರ ಲ್ಲಾವ ಉತ್ಸುಕತೆಯನ್ನೂ ತೋರುತ್ತಿರಲಿಲ್ಲ. ಹೀಗಾಗಿ ವಿಜಯೆಯ ಪ್ರಕೃತಿ ಯನ್ನೊಮ್ಮೆ ನರೇಂದ್ರನಿಗೆ ತೋರಿಸಬೇಕೆಂಬ ಸೂಚನೆ ಆತನ ಮನದಲ್ಲೇ ಉಳಿದು ಬಿಡುತ್ತಿತ್ತು. ಆದರೂ ನರೇಂದ್ರ ತರುಣನಾದರೂ ಅನೇಕ ಬುದ್ಧಿ ವಂತ ಡಾಕ್ಟರರಿಗಿಂತ ಯಾವ ರೀತಿಯಲ್ಲೂ ಹಿಂದೆ ಬೀಳುವವನಲ್ಲವೆಂದು ಆತನಿಗೆ ಆತ್ಮವಿಸ್ವಾಸವಿತ್ತು.

ಈ ರಹಸ್ಯ ಹೊರಬೀಳಲು ಹೆಚ್ಚುಕಾಲ ಹಿಡಿಯಲಿಲ್ಲ. ಐದಾರು ದಿನ ದಲ್ಲಿಯೇ ದಯಾಲನು "ಮಗಳೇ, ಕಾಲೀಪದನನ್ನು ಹೇಗೆ ಇಟ್ಟುಕೊ ಳ್ಳಲಿ?" ಎಂದ.

ಈ ಪ್ರಶ್ನೆ ಮೊದಲೇ ಬರಬಹುದೆಂದು ಊಹಿಸಿದ್ದಳು. ಆದರೂ ಆಕೆ "ಯಾಕೆ?" ಎಂದಳು.

"ನಿಮ್ಮ ಮನೆಯಿಂದ ಹೊರಗೆ ಹಾಕಿದವನನ್ನು ನಾನು ಯಾವ ಸಾಹ ಸದಿಂದ ಇಟ್ಟುಕೊಳ್ಳಲಿ?"

"ಆದರೆ ಇದೂ ನನ್ನದೇ ಮನೆಯಿದೆ"

"ಅದಂತೂ ನಿಜ ನಾವೆಲ್ಲ ನಿಮ್ಮ ಆಶ್ರಯದಿಂದಲೇ ಇಲ್ಲಿ ಇದ್ದೇವೆ. ಆದರೆ—"

"ನೀವು ಇಟ್ಟುಕೊಳ್ಳಬಾರದೆಂದು ಆತನೇನು ಹೇಳಿರುವನೆ?"

ದಯಾಲ ಸುಮ್ಮನಾದ. ವಿಜಯೆ ಒಲವನ್ನರಿತು "ಹಾಗಾದರೆ ಕಾಲಿ ಪದನನ್ನು ನನ್ನಲ್ಲಿಗೆ ಕಳಿಸಿರಿ. ಆತ ನನ್ನ ತಂದೆಯ ಕಾಲದಿಂದಲೂ ನಡೆದು ಬಂದ ನೌಕರ, ಅವನನ್ನು ಮನೆಗೆ ಕಳಿಸಲಾರೆ."

"ಮಗೂ, ಹೀಗೆ ಮಾಡಿದರೆ ಒಳಿತಾಗದು. ಅವನ ಅಪಮಾನ ಮಾಡು ವುದೂ ನಿನ್ನ ಕರ್ತವ್ಯವಲ್ಲ."

"ಹಾಗಾದರೆ ನಾನೇನು ಮಾಡಬೇಕೆಂದು ಹೇಳುವಿರಿ?"

"ನೀನೇನೂ ಮಾಡುವದು ಬೇಡ, ಅವನಾಗಿಯೇ ಮನೆಗೆ ಹೋಗ ಲಿರುವ.''

''ಹೋಗುವದಾದರೆ ಹೋಗಲಿ. ಹೋಗುವ ಮೊದಲೊಮ್ಮೆ ನನಗೆ ಭೆಟ್ಟಿಯಾಗಿ ಹೋಗಲಿ."

ಆ ದಿನ ಈಬಗ್ಗೆ ಇನ್ನೇನೂ ಮಾತುಕತೆ ನಡೆಯಲಿಲ್ಲ. ಆಕೆಯ ಮಾತಿನಲ್ಲಡಕವಾದ ವೇದನೆ, ವ್ಯಂಗಗಳನ್ನು ಕಂಡು ದಯಾಲಬಾಬುವು ಇನ್ನೇನೂ ಮಾತಾಡಲಿಲ್ಲ.

ಆ ಮೇಲೆ ೬ ದಿನವಾದರೂ ದಯಾಲನ ಸುಳಿವಿಲ್ಲ. ಅವರು ತಮ್ಮ ಕೆಲಸಕ್ಕೆ ಬರುವದಿಲ್ಲವೆಂದು ಗೊತ್ತಾಯಿತು. ಅದರ ಬಗ್ಗೆ ಕಾರಣ ಕೇಳ ಬೇಕೆಂದು ಯೋಚಿಸುವಷ್ಟರಲ್ಲಿಯೇ ಹೊರಗೆ ಕೆಮ್ಮುವ ಸಪ್ಪಳ ಕೇಳಿಸಿತು. ಆಕೆ ಎದ್ದು ಸನ್ಮಾನದಿಂದ ಅವರನ್ನು ಕರೆತಂದಳು.

ದಯಾಲರ ಹೆಂಡತಿ ಯಾವಾಗಲೂ ಸೀಕಿನವಳು. ಆಕೆಯ ಅಸ್ವಾಸ್ಥ್ಯ ಒಮ್ಮೆಲೇ ಹೆಚ್ಚಾದುದರಿಂದ ಅವರೆಲ್ಲಿಯೂ ಹೊರಬಿದ್ದಿರಲಿಲ್ಲ. ತಮ್ಮ ಆಹಾರ ಬೇಯಿಸಿಕೊಳ್ಳಬೇಕಾಗುತ್ತಿತ್ತು. ಅವರ ಮುಖಮುದ್ರೆಯಿಂದ ಅಂತಹ ಅಂಜಿಕೆಯ ಪ್ರಸಂಗವಿಲ್ಲವೆಂದು ಗ್ರಹಿಸಿದಳು. ಆದರೂ "ಈಗ ಅವರ ಪ್ರಕೃತಿ ಹೇಗಿದೆ?'' ಎಂದು ಕೇಳಿದಳು.

''ಇಂದು ಹುಶ್ಯಾರಾಗಿದ್ದಾರೆ. ನರೇಂದ್ರನಿಗೆ ಪತ್ರ ಕಳಿಸಿದ್ದೆ. ನಿನ್ನೆ ಸಾಯಂಕಾಲ ಬಂದು ಔಷಧ ಕೊಟ್ಟು ಹೋದ. ಅದೆಂತಹ ಚಿಕಿತ್ಸೆಯೆಂದು ಹೇಳಲಿ, ಮಗೂ, ೧೪ ತಾಸಿನೊಳಗಾಗಿಯೇ ಪೂರ್ಣ ಗುಣವಾಗಬೇಕೆ?''

''ಗುಣವಾಗದೇನು ಮಾಡೀತು? ನಿಮ್ಮೆಲ್ಲರಿಗೆ ಆತನಲ್ಲಿರುವ ವಿಶ್ವಾಸ ವೇನು ಅಸಾಧಾರಣವಾದದ್ದೇ?"

''ಅದು ನಿಜ. ಆತ ಬಂದನೆಂದರೆ ಸಾಕು. ಎಷ್ಟೋ ವಿಶ್ವಾಸ ಬಂದು ಬಿಡುತ್ತಿದೆ. ಪರಿಹಾರವಾಯಿತು ಎಂದೆನಿಸುತ್ತಿದೆ. ಆದರೆ ಈ ಸಲ ಅವರು ನಮ್ಮ ಮನೆಯವಳ ಚಿಕಿತ್ಸೆ ಇಷ್ಟೇ ಮಾಡಲಿಲ್ಲ. ಇನ್ನೂ ಒಬ್ಬರ ಬಗ್ಗೆ ಮಾಡಿ ಹೋಗಿದ್ದಾರೆ'' ಎಂದವರೇ ಒಂದು ಕಾಗದವನ್ನು ತೆಗೆದು ಮೇಜಿನ ಮೇಲಿಟ್ಟರು.

ಅದು ವಿಜಯೆಗಾಗಿ ಬರೆದ ಔಷಧ—ಅನುಪಾನ. ಆಕೆಗೆ ತುಂಬ ಹರುಷವಾಯಿತು.

" ಮಗೂ, ಅಲಕ್ಷಿಸಬೇಡ. ಔಷಧದ ಪರೀಕ್ಷೆಯನ್ನಾದರೂ ಮಾಡಿ ನೋಡು''

" ಹೇಗೆ ತೆಗೆದು ಕೊಳ್ಳಲಿ? ನನ್ನನ್ನು ನೋಡದೆ ಮಾಡದೆ ಕೊಟ್ಟ ಔಷಧ "

" ಮಗೂ, ಇದೇನನ್ನುವಿ? ದಕ್ಷಿಣೆಗೆ ತಕ್ಕ ಪ್ರದಕ್ಷಿಣೆಯೆನ್ನುವ ಇಲ್ಲಿಯ ಡಾಕ್ಟರರೆಂದು ಭಾವಿಸುವಿಯಾ? ಆತ ವಿಲಾಯತಿಯಲ್ಲಿ ದೊಡ್ಡ ಪರೀಕ್ಷೆ ಪಾಸಾದವ. ಅವನಿಗೆ ತನ್ನ ಜವಾಬುದಾರಿಯಿದೆ. ನಿಮ್ಮನ್ನು ಪರೀಕ್ಷಿಸಿಯೇ ಈ ಔಷಧ ಕೊಟ್ಟಿದ್ದಾನೆ.

" ನನ್ನನ್ನೆಲ್ಲಿ ಪರೀಕ್ಷಿಸಿರುವ? ನೀವು ಹೇಳಿದ ಮಾತಿನಿಂದ ಕೊಟ್ಟಿರ ಬೇಕು "

" ಇಲ್ಲ! ಇಲ್ಲ!! ಎಂದೂ ಇಲ್ಲ!! ನಿನ್ನೆ ತೋಟದಲ್ಲಿ ನೀವು ನಿಂತಾಗ ನಿಮ್ಮ ಮುಂದಿನಿಂದಲೇ ಆತ ಹಾದು ಹೋಗಿದ್ದ. ಆಗ ನಿಮ್ಮನ್ನು ಚನ್ನಾಗಿ ನೋಡಿದ್ದ. ಆಗ ನೀವೆಲ್ಲಿಯೋ ಅನ್ಯಮನಸ್ಕರಾಗಿರಬೇಕು ''—

" ಆ! ಅವರೇನು ಸಾಹೇಬರ ಪೋಷಾಕಿನಲ್ಲಿದ್ದರೆ? ತಲೆಯ ಮೇಲೆ ಹ್ಯಾಟು ಇತ್ತೆ? ''

ದಯಾಲರು ಗಹಗಹಿಸಿ ನಕ್ಕರು: " ಹೌದು, ಮಗೂ, ನಾನೂ ಹಾಗೆಯೇ ಮೋಸ ಹೋಗಿದ್ದೆ ''

ಆತ ಮುಂದಿನಿಂದ ಹೋದುದೇನೋ ನಿಜ. ನನ್ನನ್ನು ಒಮ್ಮೆ ನೋಡಿದುದೂ ನಿಜ. ಆದರೆ ಯಾರೋ ಪೋಲೀಸ ಅಧಿಕಾರಿ ಇರಬಹು ದೆಂದು ತಲೆ ಕೆಳಗೆ ಹಾಕಿದ್ದಳು. ಆಕೆಯ ಹೃದಯದಲ್ಲಾವ ತುಮುಲ ನಡೆದಿದೆಯೆಂದು ದಯಾಲರು ಗ್ರಹಿಸಲೇ ಇಲ್ಲ. ತಮ್ಮ ಮಾತೇ ಮುಂದರಿಸಿ ದರು. " ನಡುವೆ ಚೈತ್ರವೊಂದೇ ಉಳಿಯಿತು. ವೈಶಾಖ ತಿಂಗಳ ಮೊದಲನೆ ಇಲ್ಲವೆ ಎರಡನೇ ವಾರದಲ್ಲಿಯೇ ಮದುವೆ ನೆರವೇರುವದು. ನಾನು ಡಾಕ್ಟರ ರಿಗೆ ನಿನ್ನ ಪ್ರಕೃತಿ ಚನ್ನಾಗಿಲ್ಲ. ಔಷಧ ಕೊಡಬೇಕಿತ್ತು. ಎಂದೆ—'' ಮುಂದೇಕೋ ಆತನ ಬಾಯಿಂದ ಮಾತು ಹೊರಡಲಿಲ್ಲ.

ಹೀಗೆ ಅಕಸ್ಮಾತ್ತಾಗಿ ನಿಂತುದರಿಂದ ಆಕೆ ದಯಾಲರು ನೋಡುತ್ತಿದ್ದ ಲ್ಲಿಯೇ ನೋಡಹತ್ತಿದಳು. ವಿಲಾಸ ಬರುತ್ತಿದ್ದ. ತಾನು ಬಂದುದರಿಂದ ನಡೆಯುತ್ತಿದ್ದ ಆಲೋಚನೆ ಬಂದಾಗಿದೆಯೆಂದೂ ಭಾವಿಸಿದ. ಇದ ರಿಂದಂತೂ ಆತನಿಗೆ ಸಿಟ್ಟೇರಿತು. ಆದರೂ ಸಂಬಾಳಿಸಿಕೊಂಡು, ಹತ್ತಿರದ ಲ್ಲಿದ್ದ ಒಂದು ಖುರ್ಚಿಯನ್ನೆಳೆದು ಕುಳಿತುಕೊಂಡ. ಆತನ ಕಣ್ಣ ಮುಂದೆಯೇ ಪ್ರಿಸ್ಕ್ರಿಪ್‌ಶನ್ ಬರೆದುದು ಬಿದ್ದಿತ್ತು. ಕಂಡೊಡನೆಯೇ ಅದನ್ನೆತ್ತಿ ಎರಡು ಮೂರು ಬಾರಿ ಓದಿ ಇದ್ದಲ್ಲಿಯೇ ಇಟ್ಟು "ನರೇಂದ್ರ ಬಾಬುವಿನ ಅನುಪಾನ ವೆಂದು ಕಾಣುತ್ತಿದೆ. ಇದು ಹೇಗೆ ಬಂತು! ಟಪಾಲಿನಿಂದಲೇ?"

ಯಾರೂ ಉತ್ತರ ಕೊಡಲಿಲ್ಲ. ವಿಜಯೆ ಹೊರಗೆ ನೋಡುತ್ತಿದ್ದಳು.

"ನರೇಂದ್ರನೊಬ್ಬನೇ ಡಾಕ್ಟರನೆಂದು ಕಾಣುತ್ತಿದೆ. ಇಲ್ಲಿ ತಂದ ಔಷಧವೆಲ್ಲ ಕುಡಿಯದೆ ಒಗೆಯಬೇಕಾಗುತ್ತಿದೆ. ಇರಲಿ. ಈ ಕಲಿಕಾಲದ ಧನ್ವಂತರಿ ಈ ಕಾಗದವನ್ನು ಹೇಗೆ ಕಳಿಸಿದನೆಂಬುದನ್ನಾದರೂ ಕೇಳುವಾ"

ಇದಕ್ಕೂ ಉತ್ತರವಿಲ್ಲ.

"ದಯಾಲರೇ, ಇಷ್ಟೊತ್ತು ನಿಮ್ಮ ಮಾತು ಬೀದಿಯ ತನಕ ಕೇಳಿ ಸುತ್ತಿತ್ತು. ನಿಮಗಾದರೂ ಇದರ ಬಗ್ಗೆ ಗೊತ್ತಿದೆಯೇ?"

ದಯಾಲರು ವಿಲಾಸನ ಕೈಕೆಳಗೆ ಕೆಲಸ ಮಾಡಬೇಕಾಗುತ್ತಿದ್ದುದರಿಂದ ತುಂಬಾ ಅಂಜಿ ನಡೆಯುತ್ತಿದ್ದರು. ಅಲ್ಲದೆ ಕಾಲೀಪದನಿಂದಾದರೂ ಈ ಸುದ್ದಿ ವಿಲಾಸನಿಗೆ ತಿಳಿಯುವಂತಿತ್ತು. ಈ ಪ್ರಶ್ನೆ ಕೇಳಿದೊಡನೆಯೇ ದಯಾ ಲರ ಬಾಯಿಂದ ಮಾತೇ ಹೊರಡಲಿಲ್ಲ.

"ಇದೇನು? ಮೋರೆ ಸುಟ್ಟ ಬೆಕ್ಕಿನಂತೆ ಮಾಡುತ್ತೀರಿ? ನಿಮಗೇನೂ ಗೊತ್ತಿಲ್ಲವೆ?"

ದಾರಿದ್ರ್ಯ ಪೀಡಿತರಿಗೆ ಛೌಕರೀ ಹೋದೀತೆಂಬ ಭಯಕ್ಕಿಂತ ಹೆಚ್ಚಿ ನದು ಇನ್ನಾವುದೂ ಇಲ್ಲ. "ಹೌದು, ದಸಿಯರೇ, ನಾನೇ ತಂದಿದ್ದೆ"

"ಹೀಗೋ, ಅವನೆಲ್ಲಿ ಸಿಕ್ಕಿದ?"

ದಯಾಲರು ಹೇಗೆ ಹೇಗೋ ಮಾಡಿ ಹೇಳಿ ಮುಗಿಸಿದರು.

"ಹಿಂದಿನ ವರ್ಷದ ಲೆಖ್ಖ ತಯಾರಿಸಲು ಹೇಳಿದ್ದೆ. ಅದೆಲ್ಲ ತಯಾ ರಾಯಿತೆ?"

"ಇನ್ನೆರಡು ದಿನದಲ್ಲಿ ಮಾಡಿ ಕೊಡುತ್ತೇನೆ."

"ಇನ್ನೂ ಯಾಕೆ ತಯಾರಾಗಿಲ್ಲ?"

"ಮನೆಯಲ್ಲೆಲ್ಲ— ತೊಂದರೆ ಇತ್ತು. ಅಡಿಗೆ—ಮಾಡಿಕೊಳ್ಳ ಬೇಕಾಗಿತ್ತು........"

"ಇಂತಹ ಮುದುಕನು ನಮಗೆ ಬೇಕಿಲ್ಲವೆಂದು ತಂದೆಯೊಡನೆ ಎಂದೋ ಹೇಳಿದ್ದೆ" ಎಂದು ನುಡಿದ ವಿಲಾಸ. ದಯಾಲರು ತಡೆ ತಡೆದು ಹೇಳಿದುದನ್ನು ಅನುಕರಿಸಿ ವ್ಯಂಗವಾಗಿ ನುಡಿದ.

ವಿಜಯೆ ಈಗ ಬಾಯಿ ತೆರೆದಳು. ಆಕೆಯ ಮೋರೆ ಪ್ರಶಾಂತ ಹಾಗೂ ಗಂಭೀರವಾಗಿತ್ತು. ಆದರೆ ಕಣ್ಣು ಮಾತ್ರ ಕಿಡಿ ಕಾರುತ್ತಿದ್ದಿತು. "ದಯಾಲರನ್ನು ಇಲ್ಲಿ ಕರೆಯಿಸಿದವರು ನಿಮ್ಮ ತಂದೆಯಲ್ಲ; ನಾನು ಗೊತ್ತೆ?"

ವಿಲಾಸ ತಡೆದ. ಇಂತಹ ಕಠೋರ ದನಿ ಆತ ಹಿಂದೆ ಕೇಳಿರಲಿಲ್ಲ. ಆ ರೀತಿಯ ಕಣ್ಣಿನ ನೋಟವನ್ನೂ ಆತ ಕಂಡಿರಲಿಲ್ಲ. ಆದರೆ ಇದಕ್ಕೆಲ್ಲ ಹೆದರುವ ಆಸಾಮಿಯಲ್ಲ ಆತ, ತುಸು ತಡೆದು ನುಡಿದ:—

"ಯಾರು ತಂದರೇನು? ಅದೆಲ್ಲ ನನಗೆ ಬೇಕಾಗಿಲ್ಲ. ನನಗೆ ಕೆಲಸ ಬೇಕು. ಕೆಲಸವೇ ಮುಖ್ಯ"

"ಮನೆಯಲ್ಲಿ ತೊಂದರೆ ಇದ್ದರೆ ಹೇಗೆ ಕೆಲಸ ಮಾಡಬೇಕು?"

"ಹೀಗೆಯೇ ಎಲ್ಲರೂ ನೆವ ಹೇಳಬಹುದು. ಅದು ಕೇಳುವದಷ್ಟೇ ನನ್ನ ಕೆಲಸವಲ್ಲ. ನಾನು ಕೊಟ್ಟ ಕೆಲಸ ಅತಿ ಜರೂರಿಯದಿತ್ತು ಅದು ಇನ್ನೂ ತನಕ ತಯಾರಾಗಿಲ್ಲವೆಂಬುದರ ಬಗ್ಗೆ ನನಗೆ ಕಾರಣ ಬೇಕಾಗಿದೆ. ಸೀಕು ತಾಪತ್ರಯ ನನಗೆ ಸಂಬಂಧವಿಲ್ಲ.

"ಅವರೇನು ಸುಳ್ಳು ಸಟೆ ಹೇಳುತ್ತಿಲ್ಲ. ಇರಲಿ, ಆ ಕೆಲಸ ಅವಶ್ಯವಾಗಿ ಆಗಲೇ ಬೇಕಿತ್ತಷ್ಟೇ? ಹಾಗಾದರೆ ನೀವಾದರೂ ಅದನ್ನೇಕೆ ಮುಗಿಸಲಿಲ್ಲ? ನೀವೇಕೆ ನಾಲ್ಕು ದಿನ ಕೆಲಸಕ್ಕೆ ಬರಲಿಲ್ಲ? ನಿಮಗೆ ಒಳಗಾದ ಸಂಕಟವಾದರೂ ಯಾವುದೆಂದು ಹೇಳಿರಿ. ನೋಡುವಾ? ನಾನು ನಿಮಗೆ ಪ್ರತಿ ತಿಂಗಳು ೨೦೦ ರೂಪಾಯಿ ಪುಕ್ಕಟೆ ಕೊಡುವದಿಲ್ಲ. ಕೆಲಸಕ್ಕಾಗಿಯೇ ಕೊಡುವುದು"

"ನಾನು ನಿನ್ನ ಕೈಕೆಳಗಿನವನೇ? ನೌಕರನೆ?"

"ಕೆಲಸ ಮಾಡಿದ್ದಕ್ಕಾಗಿ ಹಣ ತೆಗೆದುಕೊಳ್ಳುವವನು ನೌಕರನಲ್ಲದೆ ಇನ್ನಾರು? ನೀವು ಮಾಡಿರುವ ಅನೇಕ ತಪ್ಪುಗಳನ್ನು ನಾನು ಸುಮ್ಮನೇ ಸಹಿಸಿದೆ. ಸಹಿಸಿದಷ್ಟೂ ನಿಮ್ಮದು ಹೆಚ್ಚಾಗುತ್ತ ನಡೆದಿದೆ. ಹೋಗಿರಿ. ನಿಮ್ಮ ಕೆಲಸ ಮಾಡಿರಿ. ಇಂದಿನಿಂದ ನೀವು ನೌಕರರು. ಇದಕ್ಕೂ ಹೆಚ್ಚಿನ ಸಂಭಂಧ ವಿಲ್ಲ. ನನ್ನ ಇತರ ನೌಕರರಿಗೆ ಅನ್ವಯಿಸುವ ನಿಯಮಗಳೇ ನಿಮಗೂ ಅನ್ವ ಯಿಸುವವು. ಹಾಗೆ ಕೆಲಸ ಮಾಡುವಂತಿದ್ದರೆ ಮಾಡಿರಿ. ಇಲ್ಲವಾದರೆ ಇನ್ನೊ ಬ್ಬರಿಗೆ ನಿಯಮಿಸಿಕೊಳ್ಳುವೆ. ಇನ್ನು ಮುಂದೆ ನನ್ನ ಕಾರ್ಯಾಲಯದಲ್ಲಿ ಹೀಗೆ ಪ್ರವೇಶಿಸಬೇಡ."

"ಇಷ್ಟು ನಿನ್ನ ಸೊಕ್ಕು!"

"ನನ್ನದಲ್ಲ ನಿಮ್ಮದು. ನನ್ನ ಕೈಕೆಳಗೆ ನೌಕರಿಮಾಡಿ. ಈ ರೀತಿ ವರ್ತಿ ಸುವಿರಾ? ನನ್ನನ್ನು ಏಕವಚನದಲ್ಲಿ ಕರೆಯುವ ಹಕ್ಕು ನಿಮಗಾರು ಕೊಟ್ಟಿ ದ್ದಾರೆ? ನನ್ನ ಮನೆಯಲ್ಲಿಯ ನನ್ನ ನೌಕರನನ್ನು ಹೊರದೂಡಲಿಕ್ಕೂ, ನನ್ನ ಅತಿಥಿಯನ್ನು ಅವಮಾನಪಡಿಸಲಿಕ್ಕೂ ಹೇಳಿದವರಾರು?"

"ಆ ನಿಮ್ಮ ಅತಿಥಿಯ ಕೈಕಾಲು ಮುರಿಯದೇ ಕಳಿಸಿದ್ದು ಅವನ ಸುದೈವವೆನ್ನಬೇಕು. ನಿರ್ಲಜ್ಜ, ನೀಚ, ಕಳ್ಳ, ಲೋಫರ್. ಅವನನ್ನೊಮ್ಮೆ ಕಂಡರೆ...."

ಈ ಗದ್ದಲ ಕೇಳಿ ಹೊರಗಿನಿಂದ ಜನ ಬಂದರು. ಅವರನ್ನು ನೋಡಿ ವಿಜಯೆಯು ತನ್ನ ಸಹಜ ಸ್ವರದಲ್ಲಿ ನುಡಿದಳು:—"ಅದು ಅವನ ಸೌಭಾ ಗ್ಯವಲ್ಲ. ನಿಮ್ಮ ಸುದೃವವೆಂದು ನಾನು ಭಾವಿಸುತ್ತೇನೆ. ಅವರು ತುಂಬಾ ಕಲಿತ ಡಾಕ್ಟರರು. ನೀವು ಹೊಡೆದರೂ ಸಹ ಅಸ್ವಸ್ಥಳ ಕೋಣೆಯಲ್ಲಿ ಅವರು ತಿರುಗಿ ಕೈಯೆತ್ತುತ್ತಿರಲಿಲ್ಲ. ಅವರ ಮೇಲೆ ಕೈಯೆತ್ತುವದಾದರೆ ಜೊತೆಗೆ ನಿಮ್ಮಂತಹ ೮-೧೦ ಮಂದಿಯನ್ನಿಟ್ಟುಕೊಂಡು ಈ ಕೆಲಸಕ್ಕೆಹತ್ತಿರಿ. ನಿಮ್ಮಿಂದ ಸಾಧ್ಯವಿಲ್ಲ. ಇರಲಿ ಈ ವಾದವಿವಾದ ಸಾಕು. ಕೆಳಗಿನ ನೌಕರರೆಲ್ಲ ಅಂಜಿ ಏನಾಯಿತೆಂದು ನೋಡಲು ಬಂದಿದ್ದಾರೆ." ಎಂದವಳೇ ಇನ್ನೊಂದು ಬಾಗಿ ಲಿನಿಂದ ಹೋಗಿಬಿಟ್ಟಳು.

೧೯

ಮಗನ ಬಾಯಿಂದ ನಡೆದ ಘಟನೆಯಲ್ಲ ತಿಳಿದು ಕ್ರೋಧ, ವಿರಕ್ತಿ, ಕೈಗೆ ಬಂದದ್ದು ಬಾಯಿಗೆ ಬಾರದ ನಿರಾಶೆಗಳಿಂದ ರಾಸಬಿಹಾರಿಯ ಬ್ರಹ್ಮ ಜ್ಞಾನವೆಲ್ಲ ಮಾಯವಾಗಿ ಬಿಟ್ಟಿತು. "ಅಯ್ಯೋ ಮಗನೆ, ನಮ್ಮನ್ನು ಕೀಳೆಂದು ತಿಳಿಯುವ ಹಿಂದುಗಳಾದರೂ ಈ ರೀತಿ ಸುಳ್ಳು ಹೇಳುವದಿಲ್ಲ. ನಾವು ಬ್ರಾಹ್ಮರಾಗಲಿ, ಯಾರೇ ಇರಲಿ. ಧೀವರ ಜಾತಿಯವರೆಂಬುದು ಸುಳ್ಳಲ್ಲ. ಬ್ರಾಹ್ಮಣರ ಮಕ್ಕಳಾಗಿದ್ದರೆ ತಮ್ಮ ಹಿತಾಹಿತ, ಸಭ್ಯತೆಯನ್ನಾದರೂ ಅರಿತುಕೊಳ್ಳುತ್ತಿದ್ದರು. ಹೋಗು, ಎಲ್ಲಿಯಾದರೂ ಕೂಲಿ-ಕುಂಬಳಿ ಮಾಡಿ ಹೊಟ್ಟೆ ತುಂಬಿಕೋ! ಗಿಳಿಗೆ ಹೇಳಿದ ಹಾಗೆ ಹೇಳಿದೆ. ಈ ಲಗ್ನವೊಂದಾಗಲಿ, ಆ ಮೇಲೆ ಬೇಕಾದಂತೆ ನಡೆಯಬಹುದು; ಆಕೆಗೆ ಸಂತೋಷಗೊಳಿಸುವದು ನಿನ್ನಿಂದ ಆಗಲೇ ಇಲ್ಲ. ಹೋದ ಅವಳ ಮೇಲೆ ಹುಕುಂ ಮಾಡಲಿಕ್ಕೆ! ಅದರಲ್ಲಿ ಅವಳಂತೂ ರಾಯ ವಂಶದ ಹುಡುಗಿ ಹರಿರಾಯನ ಮೊಮ್ಮಗಳು. ಹರಿರಾಯ ಕಡಿಮೆ ಆಸಾಮಿಯಲ್ಲ. ಅವನ ಸಿಟ್ಟೆಂದರೆ ಅಷ್ಟೇ ಭಯಂಕರ. ಮೂರ್ಖ! ಮಾನಮರ್ಯಾದೆ ಹೋಯಿತು. ಇಷ್ಟು ದೊಡ್ಡ ಆಸ್ತಿ ಕೈತಪ್ಪಿ ಹೋಯಿತು. ತಿಂಗತಿಂಗಳಿಗೆ ಇನ್ನೂರು ರೂಪಾಯಿ ಬರುವದೂ ನಿಂತಿತು. ಎಷ್ಟಾದರೂ ಒಕ್ಕಲಿಗರ ಮಗ, ಹೋಗು ಗದ್ದೆ ಹೂಡಿ ಬದುಕು. ಅದೆಲ್ಲ ಬಿಟ್ಟು ಅವಳ ಬಗ್ಗೆ ನನ್ನಲ್ಲಿ ದೂರಲು ಬಂದಿದ್ದಾನೆ. ನನ್ನ ಮುಂದೆ ನಿಲ್ಲಬೇಡ. ನಿರ್ಭಾಗ್ಯ!"

ಹೀಗಾಗದಿದ್ದರೆ ಒಳಿತಾಗುತ್ತಿತ್ತೆಂದು ವಿಲಾಸನಿಗೂ ಅನಿಸಹತ್ತಿತ್ತು. ಅದರ ಮೇಲಂತೂ ತಂದೆಯ ಈ ಉಗ್ರಮೂರ್ತಿಯನ್ನು ಕಂಡು ಆತ ಹೌಹಾರಿದ. ಆದರೂ ತನ್ನನ್ನು ಸಮರ್ಥಿಸಿಕೊಳ್ಳಲು ಯತ್ನಿಸುತ್ತಿರುವಷ್ಟರಲ್ಲಿಯೇ ತಂದೆ ತನ್ನ ಕೋಣೆಗೆ ನಡೆದು ಬಿಟ್ಟಿದ್ದ. ರಾಸಬಿಹಾರಿ ತಲೆಯಲ್ಲೇನೇ ಇದ್ದರೂ, ನೂರಾರು ಜೀವನದ ಅನುಭವ ಪಡೆದದ್ದರಿಂದ ಮಾರನೆ ದಿನ ಎಂದಿನಂತೆ ವಿಜಯೆಯಲ್ಲಿಗೆ ಹೋಗಿ, ಒಂದು ಖುರ್ಚಿಯನ್ನೆಳೆದು ಕುಳಿತುಕೊಂಡ.

ವಿಜಯೆಯ ಕ್ರೋಧವೂ ತಣ್ಣಗಾಗುತ್ತ ಬಂದಿದ್ದಿತು. ನಿನ್ನಿನ ಪ್ರಸಂಗವನ್ನು ನೆನೆದು ಆಕೆಯೂ ಲಜ್ಜೆಪಡುತ್ತಿದ್ದಳು. ನೌಕರರೆಲ್ಲರ ಮುಂದೆಯೇ

ನಿನ್ನಿನ ನಾಟಕ ನಡೆದುದು. ಅವರ ಮುಖಾಂತರ ಇದು ಮನೆಮನೆಯ ಮಾತಾಗಿ, ಜನ ನೆರೆದಲ್ಲೆಲ್ಲ ಇದನ್ನೇ ಆಡಿಕೊಳುತ್ತಿರಬಹುದೆಂದು ಅನ್ನಿಸಿದ್ದರಿಂದ ಆಕೆಯಿನ್ನೂ ಮನೆಯಿಂದ ಹೊರಬಿದ್ದಿರಲಿಲ್ಲ. ನಿನ್ನೆ ನೌಕರನೆಂದು ಹೀಯಾಳಿಸಿದ ವಿಲಾಸನನ್ನೇ ಇನ್ನೊಂದು ತಿಂಗಳಲ್ಲಿ ವರಿಸಬೇಕಾದೀತೆಂಬ ಕಲ್ಪನೆ ಬಂದುದರಿಂದ ಆಕೆಯ ನಾಚಿಕೆಗೆ ಮೇರೆ ಉಳಿಯಲಿಲ್ಲ.

ಪ್ರಸನ್ನ ಮುಖದಿಂದ ಸಾವಕಾಶವಾಗಿ ರಾಸಬಿಹಾರಿಯು ಕೋಣೆಯಲ್ಲಿ ಕಾಲಿಟ್ಟ. ಅತ್ತ ನೋಡಲು ವಿಜಯೆಯಿಂದ ಆಗಲಿಲ್ಲ. ಆದರೆ ಇಂತಹ ಪ್ರಸಂಗವನ್ನು ಎದುರಿಸಲೇಬೇಕಾದೀತೆಂದು ಗೊತ್ತಿದ್ದುದರಿಂದ ನಿನ್ನೆಯಿಂದಲೂ ಯೋಚಿಸಿ ಒಂದು ಯೋಚನೆ ತಯಾರಿಸಿಟ್ಟಿದ್ದಳು. ಅದಕ್ಕಾಗಿ ಆಕೆಗೆ ತುಸು ಹಗುರೆನಿಸಿ ಧೈರ್ಯ ಬಂದಿತ್ತು. ಆದರೆ ಆತನ ಸ್ವರಕೇಳಿ ಆಕೆಗೆ ಆಶ್ಚರ್ಯವಾಯಿತು. "ಮಗೂ, ನಿನ್ನಿನ ಸುದ್ದಿ ಕೇಳಿ ತುಂಬ ಸಂತೋಷವಾಯಿತು. ನಾನು ನಿನ್ನೆಯೇ ಬರುತ್ತಿದ್ದೆ. ಆದರೆ ಪ್ರಕೃತಿ ಅಷ್ಟು ಚೆನ್ನಾಗಿರಲಿಲ್ಲ. ನಿನ್ನಿಂದ ಇದನ್ನೇ ಬಯಸುತ್ತಿದ್ದೆ. ದೀರ್ಘಜೀವಿಯಾಗು ಮಗೂ, ದೇವರೆ, ಸುಖದಲ್ಲಿ, ಕಷ್ಟದಲ್ಲಿ, ಏರಿಳಿತದಲ್ಲಿ ಎಲ್ಲ ಬಗೆಇರವಿನಲಿ ನಿನ್ನ ನಾಮವೇ ನನಗೆ ಅನುಗೋಲಾಗಲಿ." ಎಂದು ಕಣ್ಣುಮುಚ್ಚಿ ಕೈಮುಗಿದ.

"ಆದರೆ ಮಗೂ, ನನ್ನಂತಹ ಉದಾಸೀನ ವ್ಯಕ್ತಿಯ ಮಗ ಹೇಗೆ ಈ ಪರಿ ಕರ್ತವ್ಯಪರಾಯಣನಾದನೆಂದೂ ನನಗೆ ತಿಳಿಯದು. ನನ್ನಂತಹನಿಗೆ ಇನ್ನೂ ಜೀವನದ ಅರ್ಥವಾಗಿಲ್ಲ ಹಾನಿಗಳನ್ನು ತಡೆಗಟ್ಟಿ ವ್ಯವಹರಿಸುವುದು ಸಾಧ್ಯವಾಗಿಲ್ಲ. ಅಂಥಾದ್ದು ಇಂತಹ ಚಿಕ್ಕ ವಯಸ್ಸಿನಲ್ಲಿಯೇ ವಿಲಾಸ ಹೇಗೆ ಅರಿತುಕೊಂಡನೋ ತಿಳಿಯದು. ಎಲ್ಲ ದೈವದಾಟ" ಎಂದು ಇನ್ನೊಮ್ಮೆ ಕೈಜೋಡಿಸಿದ.

ವಿಜಯೆ ಸುಮ್ಮನಿದ್ದಳು. ತುಸುಹೊತ್ತು ಮೌನವಾಗಿದ್ದು ರಾಸಬಿಹಾರಿಯೇ ಮಾತು ಮುಂದರಿಸಿದ "ಆದರೆ ಯಾವುದನ್ನೂ ಅತಿಯಾಗಿ ಮಾಡಬಾರದು. ಕಾರ್ಯಸಾಧನೆಯೇ ವಿಲಾಸನ ಜೀವನ—ಉಸಿರು ಎಂಬುದನ್ನು ಬಲ್ಲೆ. ಅದರ ಮುಂದೆ ಅವನಿಗೆ ಇನ್ನೇನೂ ಕಾಣಿಸದು. ಕರ್ತವ್ಯ ಕರ್ಮವನ್ನೆಂದೂ ಆತ ತಿರಸ್ಕರಿಸಲಾರ. ಆದರೆ ಅದಕ್ಕಾಗಿ ಜನರ ಅಪಮಾನ ಮಾಡಬೇಕೆಂದು ಯಾರೂ ಹೇಳಲಾರರು. ದಯಾಲರಂತಹರ

ಅಪರಾಧವನ್ನೂ ಮನ್ನಿಸಲಾಗದೇ? ಕರ್ತವ್ಯದ ಮುಂದೆ ಎಲ್ಲರೂ ಸಮಾನ ರೆಂಬುದನ್ನು ಬಲ್ಲೆ. ಕೆಲಸವಾಗದಿದ್ದರೆ ಇನ್ನೊಂದೆರಡು ದಿನದಲ್ಲಾಗುತ್ತಿತ್ತು. ಒಂದು ವೇಳೆ ಆಗಲಿಲ್ಲ ವೆಂದರೂ ಒಂದು ಹತ್ತು ರೂಪಾಯಿ ಹಾನಿ ತಟ್ಟು ತ್ತಿತ್ತು. ನಿಜ. ಅಷ್ಟಕ್ಕಾಗಿ ಇಂತಹರ ಮಾನಹಾನಿ ಮಾಡುವದು ಯಾರಿಗೂ ಸೇರದು. ನಿಮ್ಮ ಜಮೀನಿನ ಶ್ರೇಯವನ್ನೇ ವಿಲಾಸ ಹಗಲಿರುಳೂ ಚಿಂತಿ ಸುತ್ತಾನೆ. ಇದು ಆತನ ಪ್ರತಿಯೊಂದು ಕೃತಿಯಿಂದಲೂ ಕಂಡು ಬರುವಂತಿದೆ. ಆದರೆ ಮಗೂ,ಹಣವಿದ್ದವರೆಂದು ತಿಳಿದು ಹಣವನ್ನು ಹಾಳುಮಾಡಬಾರದು. ನನ್ನ ಮಾತಂತಿರಲಿ,ನಾವೆಷ್ಟಾದರೂ ಮುಪ್ಪಿನವರು. ಧನದಾಸೆಯಿಲ್ಲ. ಆದರೆ ಗೃಹಸ್ಥರೆನ್ನುವವರು ಹಣವನ್ನು ಗಳಿಸಿಡಲೇ ಬೇಕು. ಯಾಕಂದರೆ ಅದರ ಹೊರತು ಜಗತ್ತಿನ ಹಿತಸಾಧಿಸಲಾರದು. ವಿಲಾಸನ ನೇತೃತ್ವದಲ್ಲಿ ನಿಮ್ಮ ಐಶ್ವರ್ಯ ಉತ್ತರೋತ್ತರ ವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ. ಆದರೆ ತುಸು ಹಾನಿಯಾಗುತ್ತದೆಂದು ಭಾವಿಸಿ ಈ ರೀತಿ ರೇಗಬಾರದು. ಅದಕ್ಕಾಗಿ ನೀವು ನಿನ್ನೆ ವಿಧಿಸಿದ ಶಿಕ್ಷೆಯು ಯೋಗ್ಯವಾದದ್ದೆ ಇದೆ. ಅವರಿಂದ ಆತನಿಗೆ ಬುದ್ಧಿ ಬಂದಿತು. ಕೆಲಸ! ಕೆಲಸ! ಜೀವನದಲ್ಲಿ ಕೆಲಸವೊಂದೇ ಸರ್ವಸ್ವವೇ? ಕೆಲ ಸದ ಮುಂದೆ ದಯೆ ಮಾಯೆ ಸಹೃದಯತೆಗಳಿಗೂ ತಿಲಾಂಜಲಿಯೇ!”

ವಿಜಯೆಯೆನೂ ಮಾತಾಡಲಿಲ್ಲ. ಆತನೇ ತುಸು ಹೊತ್ತು ತನ್ನಲ್ಲಿಯೇ ಧ್ಯಾನಮಗ್ನನಾಗಿ ನಂತರ ತುಸು ನಕ್ಕು ನುಡಿದ. “ನನಗಿರುವ ಎರಡು ಮಕ್ಕಳಲ್ಲಿ ಒಬ್ಬ ಅದ್ವಿತಿಯ ಕರ್ತೃತ್ವಶಾಲಿ. ಇನ್ನೊಬ್ಬಳು ಸ್ನೇಹಸೌಹಾ ರ್ದತೆಯ ರಸ ತರಂಗಣಿ. ಒಬ್ಬನಿಗೆ ಕರ್ತವ್ಯವೆಂದರೆ ಜೀವ. ಇನ್ನೊಬ್ಬಳಿಗೆ ದಯೆ ಮಾಯೆಯೆಂದರೆ ಪ್ರಾಣ. ಇವರಿಬ್ಬರೂ ಕೂಡಿ ಪರಸ್ಪರಪೂರಕವಾಗಿ ಈ ಮರ್ತ್ಯವನ್ನೇ ನಂದನವನವನ್ನಾಗಿ ಮಾಡಿದ ದಿನವನ್ನೆಂದು ಕಂಡೆನೋ ಎಂದು ಮನಸ್ಸು ತಲ್ಲಣಿಸುತ್ತದೆ. ಆ ದಿನ ನಾನು ಬೇಗನೆ ಕಾಣಬಹುದೆಂದು ಒಳದನಿ ನುಡಿಯುತ್ತಿದೆ ಇಷ್ಟೇ ಅಲ್ಲ; ಧರ್ಮದ ಬಗ್ಗೆಯೂ ಆತನಿಗೆ ಅಸಾಧಾರಣವಾದ ಪ್ರೀತಿಯಿದೆ. ಮಂದಿರ ಸ್ಥಾಪನೆಗಾಗಿ ಆತ ತೋರಿದ ಉತ್ಸಾಹವೆಷ್ಟು? ಪಟ್ಟ ಶ್ರಮವೆಷ್ಟು? ಹೊರಗಿನಿಂದ ನೋಡಿದವರು ಆತನ ಧರ್ಮಪ್ರೇಮವನ್ನು ಪ್ರಶಂಸಿಸಿಯೆ ತೀರುವರು. ಕೇವಲ ಬ್ರಾಹ್ಮಧರ್ಮ ಕ್ಕಾಗಿಯೇ ಆತ ಜೀವಿಸಿದಂತಿದೆ. ಏನೇ ಆಗಲಿ ಮಗೂ, ನೀನೂ ಆತನನ್ನು

ಚನ್ನಾಗಿ ಬಲ್ಲಿ. ನಿನ್ನಿಂದಲೇ ಆತನ ಎಲ್ಲ ಇಷ್ಟಿಗಳೂ ನಿರ್ವಿಘ್ನವಾಗಿ ಸಾಗ ಬೇಕು. ಆತನಲ್ಲಿ ಶಕ್ತಿಯಿದೆ. ನಿನ್ನಲ್ಲಿ ಬುದ್ಧಿ ಇದೆ. ಆತನ ಜೀವನ ಉಜ್ವಲ ವಾದೀತೆಂದು ನನಗನಿಸುತ್ತದೆ. ಆತ ಭಾರ ಹೊರುವ. ನೀನು ದಾರಿ ತೋರುವಿ. ಆದರೆ ಎಳ್ಳಿನಲ್ಲಿ ಅಡಗಿದ ಎಣ್ಣೆಯಂತೆ ಈ ಕೋಮಲ ಮನ ಸ್ಸಿನಲ್ಲಿ ಅಡಕವಾದ ನಿನ್ನ ಬುದ್ಧಿಶಕ್ತಿಯಿಂದ ಆತನ ಜೀವನ ಮಂಗಲಮಯ ವಾದೀತು—ಇದನ್ನು ನೆನಸಿ ನನಗೆ ತುಂಬ ಸಂತೋಷವಾಗಿದೆ."

ವಿಜಯೆಗೆ ಏನನ್ನಲೂ ತಿಳಯದದ್ದರಿಂದ ಸುಮ್ಮನುಳಿದಳು. ರಾಸ ಬಿಹಾರಿ ಗಡಿಯಾರವನ್ನು ನೋಡಿ "ಅಯ್ಯೋ ಹತ್ತಾಗಿ ಹೋಯಿತು. ದಯಾಲನ ಹೆಂಡತಿಯ ಸ್ಥಿತಿ ನೋಡಲು ಹೋಗಬೇಕಾಗಿದೆ." ಎಂದ.

"ಈಗ ಅವಳ ಸ್ಥಿತಿ ಹೇಗಿದೆ?"

"ಈಗ ಚನ್ನಾಗಿದ್ದಾಳೆ. ಮಗೂ, ಹೇಳಬೇಕಾದ ಮಾತೊಂದು ಹಾಗೆಯೇ ಉಳಿಯಿತು. ಮಗೂ, ಈ ಮುದುಕನ ಬಿನ್ನಹವೊಂದನ್ನು ಲಾಲಿಸುವಿಯಾ? ನಿನ್ನೆ ಇಡೀ ದಿನ ವಿಲಾಸ ಕಣ್ಣಿಗೆ ಕಣ್ಣು ಹಚ್ಚಲಿಲ್ಲ. ಆತನಿಗೆ ಪಶ್ಚಾತ್ತಾಪವಾಗಿದೆ. ಆತ ಬಂದು ಕ್ಷಮೆ ಕೇಳಿದರೆ ಕ್ಷಮಿಸುವಿಯಾ? ಆದರೂ ಒಮ್ಮೆಲೇ ಆತನನ್ನು ಕ್ಷಮಿಸುವದು ಬೇಡ. ತಪ್ಪು ಮಾಡಿದವನಿಗೆ ಶಿಕ್ಷೆಯಾಗಲೇ ಬೇಕು. ಅಭಿಮಾನದಿಂದ ಆತ ನಿನ್ನೆ ಬರಲಿಲ್ಲ. ಆದರೆ ಇಂದು ಬಂದೇ ಬರುವ. ಆದರೂ ಕೆಲದಿನ ಆತನೊಡನೆ ಕಠೋರವಾಗಿಯೇ ವರ್ತಿಸು.—ಇದೊಂದೇ ನನ್ನ ಬೇಡಿಕೆ"

ರಾಸಬಿಹಾರಿ ಹೋದ ಬಳಿಕ ಆಕೆ ಸ್ತಬ್ಧಳಾಗಿದ್ದಳು. ಈ ರೀತಿಯ ಮಾತು ಬಂದೀತೆಂದು ಆಕೆಯೆಂದೂ ಊಹಿಸಿರಲಿಲ್ಲ. ಆತ ಬಂದರೆ ಗಂಭೀರವಾಗಿರಬೇಕೆಂದು ಯೋಚಿಸಿಕೊಂಡಿದ್ದಳು. ಜಗಳವಾಡಿ ಹೋಗು ವಾಗ ವಿಲಾಸನೊಬ್ಬನೇ ಬಂದಿದ್ದರೂ ಈಗ ತಂದೆಯನ್ನು ಕರೆದುಕೊಂಡೇ ಬರುವನೆಂದು ಊಹಿಸಿದ್ದಳು. ಅವರೊಡನೆ ಯಾವ ಧಾಟಿಯಲ್ಲಿ ಮಾತಾಡ ಬೇಕೆಂಬ ಸಿದ್ಧತೆ ಮಾಡಿದ್ದಳು.

ಆತ ಹೊರಟು ಹೋದ ಮೇಲೆ ಹಿಂದಿನ ದಿನಗಳನ್ನೆಲ್ಲ ನೆನಸಿ ಕೊಂಡಳು. ಒಂದು ದಿನ ಈ ಮುದುಕನನ್ನು ಎಷ್ಟು ಆದರದಿಂದ ಕಾಣು ತ್ತಿದ್ದ; ದಿನಗಳೆದಂತೆ ಅವೆಲ್ಲ ಹೇಗೆ ಕ್ಷೀಣವಾಗುತ್ತ ಸಾಗಿತ್ತು— ಇವುಗಳ

ನೆನಪು ಬಂದು ಆಕೆಗೆ ದುಃಖವಾಯಿತು. ತಾನು ಆತನೊಲನೆ ನಡೆದು ಕೊಂಡುದು ತಪ್ಪಾಯಿತೆಂದೂ, ಇದರಿಂದ ಪರಲೋಕದಲ್ಲಿರುವ ತಂದೆಯ ಆತ್ಮಕ್ಕೆ ದುಃಖವಾಗಿರಬೇಕೆಂದೂ ಆಕೆ ಬಗೆದಳು. ರಾಸಬಿಹಾರಿಯಂತಹ ಸತ್ಯಪ್ರಿಯ, ತನ್ನ ಮಗನೆಂದರೂ ಕ್ಷಮಿಸಲಿಲ್ಲ— ಕ್ಷಮಿಸೆಂದು ಕೇಳಲಿಲ್ಲ."

ವಿಲಾಸನದಾದರೂ ತಪ್ಪೇನು? ಅದೆಲ್ಲ ಈರ್ಷೆಯ ಫಲ. ಈರ್ಷೆ ಮಾಡಬಾರದೆಂಬುದು ನಿಜ. ಆದರೂ ಅದು ಮನಸ್ಸಿನ ಸಹಜ ಪ್ರವೃತ್ತಿ. ಹೀಗೆ ಯೋಚಿಸಿ ತನ್ನ ಮನಸ್ಸನ್ನೆಷ್ಟೋ ಹಗುರು ಮಾಡಿಕೊಂಡಳು.

"ನಾನು ಬರುವದಿಲ್ಲವೆಂದು ಮನೆಗೊಂದು ಪತ್ರ ಬರೆಯಲೇ, ಅಮ್ಮಾ" ಎಂದು ಕಾಲೀಪದನು ಕೇಳಿದನು.

" ಹಾಗೇ ಆಗಲಿ. "

ಕಾಲೀಪದ ಹೋಗಲು ಹೊರಟ. ತಿರುಗೊಮ್ಮೆ ಕರೆದು " ಕಾಲೀ, ಬರುತ್ತೇನೆಂದು ಪತ್ರ ಬರೆದಿರುವಿಯಷ್ಟೇ. ಅದಕ್ಕಾಗಿ, ಒಂದು ತಿಂಗಳ ಮಟ್ಟಿಗೆ ಹೋಗಿ ಬಾ. ಎಲ್ಲರನ್ನೂ ಕಂಡು ಬರಬಹುದು " ಎಂದಳು.

ಕಾಲೀಪದ ಮನದಲ್ಲಿಯೇ ಚಕಿತನಾದ. ಆದರೂ "ಹೋಗಿ ಬರುತ್ತೇನಮ್ಮಾ" ಎಂದು ಹೊರಟು ಹೋದ.

## ೨೦

ಕೊನೆಯ ಕೋಣೆಯೊಂದರಲ್ಲಿ ವಿಜಯೆಯ ಜಮೀನುದಾರಿಯ ವ್ಯವಸ್ಥೆ ನೋಡುವ ಕೆಲಸ ನಡೆಯುತ್ತಿತ್ತು. ಅದರಿಂದೀಚೆ ಮರಗಳ ಸಾಲು. ಹೀಗಾಗಿ ಮೇಲೆ ನಿಂತು ನೋಡಿದರೆ ಆಫೀಸಿಗೆ ಯಾರು ಬಂದು ಹೋದುದೂ ತಿಳಿಯುವಂತಿಲ್ಲ.

ಆ ದಿನದಿಂದ ದಯಾಲ ತಿರುಗಿ ಬರಲಿಲ್ಲ. ಕೆಲಸಕ್ಕೆ ಬರುತ್ತಾರೋ ಇಲ್ಲವೋ, ಎಂಬುದನ್ನು ಸಹ ತಿಳಿಯಲಿಕ್ಕಾಗಲಿಲ್ಲ. ವಿಲಾಸ ಬಿಹಾರಿ ಇತ್ತ ಬರುವಂತಿಲ್ಲ. ಒಮ್ಮೆ ರಾಸಬಿಹಾರಿ ಬಂದಿದ್ದ. ಆದರೆ ಹತ್ತು ಮಿನಿಟಿಗಿಂತ ಹೆಚ್ಚು ನಿಂತಿರಲಿಲ್ಲ. ಮಾತಾಡಿದ ವಿಷಯವೂ ಅಸ್ವಸ್ಥತೆಯ ಸಂಬಂಧವಾದದ್ದು.

ಮಗನ ವಿರುದ್ಧವಾಗಿ ವಾದಿಸಿದ ಮುದುಕನ ಬಗೆ ಈಗ ಯಾವ ಕಾರಣದಿಂದಲೋ ಬೇರೆಯ ತೆರನಾಗಿದೆಯೆಂದು ಆಕೆ ಕಂಡುಕೊಂಡಿದ್ದಳು.

ಹೀಗಾಗಿ ಆಕೆಯ ದಿನ ಅಶಾಂತಿ, ಅತೃಪ್ತಿಯಿಂದ ಸಾಗುತ್ತಿತ್ತು. ಇಂತಹ ಕೆಲದಿನ ಉರುಳಿತು.

ಸಾಯಂಕಾಲ ನದಿಯ ತೀರದಲ್ಲಿ ಒಬ್ಬಳೇ ತಿರುಗಾಡಲು ಹೋಗಿದ್ದಳು. ಮುದುಕ ನೌಕರ ಲೆಖ್ಖ ಪತ್ರಗಳನ್ನು ಕಂಕುಳಲ್ಲಿಟ್ಟುಕೊಂಡು ಬಂದು ಭಕ್ತಿಯಿಂದ ನಮಸ್ಕರಿಸಿ "ಅಮ್ಮಾವರೇ, ಎಲ್ಲಿ ಹೋಗುತ್ತೀರಿ, ಕನ್ಸ್ಟೈಯು ಸಿಂಹನೂ ಇಲ್ಲವಲ್ಲ" ಎಂದ.

"ಇಲ್ಲಿಯೇ ನದೀ ತೀರದಲ್ಲಿ ತುಸು ಅಡ್ಡಾಡಿ ಬರೋಣವೆಂದು ಹೊರಟೆ. ಆಳಿನ ಅವಶ್ಯಕತೆ ಇಲ್ಲ. ನಿನ್ನಿಂದೇನು ಕೆಲಸವಾಗುವದಿದೆಯೇ?"

"ಹೌದು. ಕೆಲಸವೇನೋ ಇತ್ತು. ಆದರೆ ನಾಳೆ ಮಾಡಿದರಾಯಿತು" ಎಂದವನೇ ಹೊರಡಲನುವಾದ.

"ಸ್ವಲ್ಪವೇ ಇದ್ದರೆ ಇಂದೇ ತೀರಿಸೋಣ. ಇಷ್ಟೆಲ್ಲ ಲೆಖ್ಖ ಪತ್ರ ತೆಗೆದುಕೊಂಡು ಎಲ್ಲಿ ಹೋಗುವಿರಿ?"

"ನೀವಿದ್ದಲ್ಲಿಯೇ ಬಂದಿದ್ದೆ. ಕಳೆದ ವರ್ಷದ ಲೆಖ್ಖಪತ್ರ ತಯಾರಾಗಿದೆ. ನೋಡಿ ನೀವು ಸಹಿ ಮಾಡಬೇಕು. ಅಲ್ಲದೆ ಈ ವರ್ಷದ ಲೆಖ್ಖಕ್ಕೂ ಪ್ರತಿ ದಿನ ನಿಮ್ಮ ಸಹಿಯಾಗಬೇಕೆಂದು ಚಿಕ್ಕರಾಯರು ಹೇಳಿದ್ದಾರೆ."

ವಿಜಯೆ ಚಕಿತಳಾಗಿ ಹೊರಗಿನ ಕೋಣೆಯಲ್ಲಿ ಬಂದು ಕುಳಿತಳು. ನಾಯಬನು ಬಂದು ಲೆಖ್ಖಪತ್ರವನ್ನೆಲ್ಲ ಮೇಜಿನ ಮೇಲಿಟ್ಟನು. ಆತ ಖಾತೆ ತೆಗೆಯುತ್ತ ಹೋದಂತೆ ನಡುವೆಯೇ ವಿಜಯೆಯು "ಈ ಹುಕುಮನ್ನು ಎಂದು ಕೊಟ್ಟಿರುವರು?" ಎಂದಳು.

"ಇಂದೇ ಬೆಳಿಗ್ಗೆ."

"ಇಂದು ಬೆಳಿಗ್ಗೆ ಬಂದಿದ್ದರೆ?"

"ಹೌದು. ದಿನಾಲು ಬರುತ್ತಾರೆ."

"ಈಗ ಅವರು ಕಚೇರಿಯಲ್ಲಿ ಇರುವರೇ?"

"ಇಲ್ಲ. ನನ್ನನ್ನು ಕಳಿಸಿಕೊಟ್ಟು ಈಗ ಮಾತ್ರ ಹೋದರು."

ಆ ದಿನದ ಘಟನೆಯನ್ನು ಎಲ್ಲ ನೌಕರರೂ ಅರಿತಿದ್ದರು. ಆಕೆಯ ಒಲವನ್ನರಿತು ನಾಯಬನು ಎಲ್ಲ ಸಂಗತಿಯನ್ನೂ ಉಸುರಿದ. "ವಿಲಾಸ ಬಿಹಾರಿಯು ದಿನಾಲು ಹನ್ನೊಂದು ಘಂಟೆಗೆ ಸರಿಯಾಗಿ ಕಚೇರಿಗೆ ಬಂದು

ಯಾರೊಡನೆಯೂ ವಿಶೇಷವಾಗಿ ಮಾತನಾಡದೆ ೫ ಘಂಟೆಗೆ ಮನೆಗೆ ಹೋಗು ತ್ತಾರೆ. ದಯಾಲ ಬಾಬುವಿಗೆ ಹೆಂಡತಿಗೆ ಗುಣವಾಗುವಷ್ಟು ದಿನ ರಜೆ ಮಂಜೂರಾಗಿದೆ."

ವಿಲಾಸನು ಅತ್ಯಂತ ಸಿಟ್ಟಿನಿಂದಲೇ ಈ ರೀತಿ ಮಾಡುತ್ತಿದ್ದಾನೆಂದು ಆಕೆ ಊಹಿಸಿದಳು. ಆದರೂ ಆಕೆ "ಈಗ ಇಡು. ನಾಳೆ ಬೆಳಿಗ್ಗೆ ಬಂದು ಸಹಿ ತೆಗೆದುಕೊಂಡು ಹೋಗಬಹುದು" ಎಂದಳು. ಆತ ಹೊರಟು ಹೋದ. ಆಕೆ ಅಲ್ಲಿಯೇ ಕುಳಿತಿದ್ದಳು. ಸಂಧ್ಯಾ ಸೂರ್ಯನ ಸುವರ್ಣ ಕಿರಣಗಳು ಸಾವಕಾಶವಾಗಿ ಬಾಡುತ್ತಿದ್ದವು. ಆದರೆ ಆಕೆ ಸ್ಥಳ ಬಿಡುವ ಲಕ್ಷಣ ಕಾಣ ಲಿಲ್ಲ. ಆಕೆ ಇನ್ನೂ ಎಷ್ಟು ಹೊತ್ತು ಹಾಗೇ ಕುಳಿತಿರುತ್ತಿದ್ದಳೋ ಹೇಳಲು ಬರುವಂತಿಲ್ಲ. ಆದರೆ ದೀಪ ಹಚ್ಚಿ ಇಡಲು ಬಂದ ನೌಕರನನ್ನು ಕಂಡು ಎದ್ದಳು. ಹೊರಗೆ ಬಂದವಳು ಯಾರನ್ನೋ ಕಂಡು ಹಾಗೆಯೆ ನಿಂತು ಬಿಟ್ಟಳು.

ಕೆಲ ಹೊತ್ತಿನಲ್ಲಿಯೇ ನರೇಂದ್ರನು ಬಂದು ನಮಸ್ಕರಿಸಿದ. ತನ್ನ ಬೆತ್ತ ಹಾಗೂ ಹ್ಯಾಟನ್ನು ಮೇಜಿನ ಮೇಲಿಟ್ಟು ನಗುತ್ತ "ನನ್ನ ಮದ್ದು ಅದ್ಭುತ ಪರಿಣಾಮ ಮಾಡಿದೆ" ಎಂದ.

"ಗೊತ್ತಾದುದು ಹೇಗೆ? ನನ್ನನ್ನು ನೋಡಿಯೋ? ಅಥವಾ ಯಾರಾ ದರೂ ಹೇಳಿದರೋ?"

"ದಯಾಲಬಾಬು ನಿಮಗೆ ಹೇಳಿಲ್ಲವೇ? ನನ್ನ ಮದ್ದನ್ನು ತಿನ್ನು ವುದು ಸಹ ಬೇಕಾಗುವದಿಲ್ಲ. ಅನುಪಾನದ ಕಾಗದದ ಮೇಲೆ ಬರೀ ಕಣ್ಣು ಹಾಯಿಸಿದರೆ ಸಾಕು, ಇಲ್ಲವೆ ಅದನ್ನು ಹರಿದು ಹಾಕುವುದರಿಂದಲೂ ಅರ್ಧ ವಾಸಿಯಾಗುತ್ತಿದೆ" ಎಂದವನೇ ಗಹಗಹಿಸಿ ನಗಹತ್ತಿದ.

ಈತ ದಯಾಲನಿಂದ ಎಲ್ಲವನ್ನೂ ತಿಳಕೊಂಡು ತನ್ನ ಗೇಲಿ ಮಾಡಲು ಬಂದಿರುವನೆಂದು ಊಹಿಸಿದಳು.

"ಹೀಗೋ— ಉಳಿದರ್ಧವನ್ನೂ ಗುಣಪಡಿಸುವ ಉದ್ದೇಶದಿಂದ ಇನ್ನೊಮ್ಮೆ ಮದ್ದು ಬರೆದುಕೊಡಲು ಬಂದಿರಾ?"

ಆತನ ನಗೆ ನಿಂತಿತು. "ಇದೊಂದು ಒಳ್ಳೆಯ ತಮಾಶೆಯಾಯಿತು."

"ಅದಕ್ಕಾಗಿಯೇ ನಿಮಗಿಷ್ಟು ಸಂತೋಷವಾಗಿರಬೇಕು.

ಆತನ ಮುಖ ಗಂಭೀರವಾಯಿತು. "ಆನಂದವಾಗಿದೆಯೇ? ಇಲ್ಲ! ಎಂದಿಗೂ ಇಲ್ಲ! ಮೊದಲೇನೋ ತುಸು ಮೋಜೆನಿಸಿದ್ದು ನಿಜ. ಆದರೆ ಕೊನೆಗೆ ಅದರಿಂದ ದುಃಖವಾಯಿತು. ವಿಲಾಸ ಬಾಬುವಿಗೆ ಮೂಗಿನ ಮೇಲೆ ಸಿಟ್ಟಿದೆಯೆಂಬುದು ನಿಜ. ಆದರೆ ನೀವೂ ಸಹ ಸಿಟ್ಟಾಗಿ ಒಂದಕ್ಕೆರಡಾಡಿದ್ದು ನಿಮಗುಚಿತವಲ್ಲ. ಇದರಿಂದ ಮುಂದೆಂತಹ ಹಾನಿಯಾದೀತೆಂದು ಲಕ್ಷಿಸಿದಿರಾ? ನನ್ನ ಸಲುವಾಗಿ ನಿಮ್ಮಲ್ಲಿ ಇಂತಹ ಘಟನೆ ಘಟಿಸಿದುದಕ್ಕಾಗಿ ತುಂಬಾ ವ್ಯಥೆಯಾಗುತ್ತಿದೆ."

ಆತನ ಸಾರಳ್ಯವನ್ನು ಕಂಡು ಮನದಲ್ಲಿಯೇ ಹರುಷಿತಳಾದಳು. ಆದರೂ ಪರಿಹಾಸ ಮಾಡುತ್ತ "ವ್ಯಥೆಯಾದರೂ ನಗುವುದನ್ನು ಮಾತ್ರ ಬಿಟ್ಟಿಲ್ಲ" ಎಂದು ತಾನೂ ನಕ್ಕುಬಿಟ್ಟಳು.

"ನೀವೇಕೆ ಹೀಗೆ ಯೋಚಿಸುತ್ತೀರಿ? ನನಗೆ ನಿಜವಾಗಿಯೂ ದುಃಖವಾಗಿದೆ. ಆದರೆ ಆಗ ನಿಮ್ಮಿಬ್ಬರ ಸಂಬಂಧ ಯಾವ ರೀತಿಯದಿದೆಯೆಂದು ನಾನು ಊಹಿಸಿರಲಿಲ್ಲ; ಆ ದಿನವೇ ಅವರ ತಂದೆ ಕೆಳಗೆ ಈ ಮಾತು ಹೇಳಿದ್ದ. ನಿನ್ನೆ ದಯಾಲಬಾಬವೂ ಇದನ್ನೇ ಪುಷ್ಟೀಕರಿಸಿದ. ಇದನ್ನು ಕೇಳಿ ನನಗಾದ ಲಜ್ಜೆ ಅಷ್ಟಿಷ್ಟಲ್ಲ. ಆದರೆ ಇಷ್ಟೆಲ್ಲ ಜನರಿರುವಾಗ ಈರ್ಷೆಗೆ ಯೋಗ್ಯವಾದ ಯಾವ ಗುಣ ನನ್ನಲ್ಲಿದೆಯೆಂಬುದೇ ನನಗಿನ್ನೂ ತಿಳಿದಿಲ್ಲ. ನೀವು ಬ್ರಾಹ್ಮ ಸಮಾಜದವರು. ಎಲ್ಲರೊಡನೆ ಮಾತಾಡುವಂತೆ ನನ್ನೊಡನೆಯೂ ಮಾತಾಡುತ್ತೀರಿ. ಇದರಿಂದ ನನ್ನಲ್ಲಾವ ದೋಷವಿದೆಯೆಂದು ಅವರು ತಿಳಿದಿದ್ದಾರೋ ಯಾರು ಬಲ್ಲರು? ಏನೇ ಆಗಲಿ ನೀವು ನನ್ನನ್ನು ಕ್ಷಮಿಸಿರಿ. ನೀವು ಸುಖಿಯಾಗಿ ಬಾಳಿರೆಂದು ಹಾರೈಸುವೆ."

ಕಡೆಯ ಮಾತು ಕೇಳಿ ವಿಜಯೆಗೆ ಕಣ್ಣೀರು ಹರಿಯಿತು. ಮೋರೆ ಬೇರೆಡೆಗೆ ಮಾಡಿ ತನ್ನ ಕಣ್ಣೊರಸಿಕೊಂಡಳು. ನರೇಂದ್ರನೇ ಮುಂದುವರಿಸಿದ. "ಇರಲಿ. ಆ ದಿನ ಕಾಲೀಪದನ ಹತ್ತರ ಮೈಕ್ರೋಸ್ಕೋಪನ್ನು ಸ್ಟೇಶನ್ನಿಗೆ ಕಳಿಸಿದುದೇಕೆ?"

"ನಿಮ್ಮ ವಸ್ತು ನಿಮಗೆ ಬೇಕೆಂದು ಹೇಳಿದುದಕ್ಕೆ."

"ಅದೇನೋ ಸರಿ. ಆದರೆ ಬೆಲೆಯ ವಿಷಯ ಮಾತ್ರ ಹೇಳಿ ಕಳಿಸಿರಲಿಲ್ಲ. ಇಂತಹ ಸ್ಥಿತಿಯಲ್ಲಿ ನಾನೇನು........?"

" ಇಲ್ಲ. ಹೇಳಿರಲಿಲ್ಲ. ಜ್ವರದ ಮೂಲಕ ಸ್ಮೃತಿ ಇರಲಿಲ್ಲ. ಅದರ ತಪ್ಪಿಗೆ ನೀವೆಂತಹ ಶಿಕ್ಷೆ ವಿಧಿಸಿದಿರೆಂಬುದನ್ನು ಬಲ್ಲಿರಾ? "

" ಆದರೆ ಕಾಲೀಪದ........"

" ಅದೆಲ್ಲ ಕೇಳಿರುವೆ. ಆತನೇನೇ ಹೇಳಿದ್ದರೂ ಅದನ್ನೆಲ್ಲ ನಂಬಿ ಬಿಟ್ಟಿರಾ? ನಿಮಗೆ ಶಿಕ್ಷಿಸುವದಿದ್ದರೆ ನನ್ನನ್ನು ದಂಡಿಸಬಹುದಿತ್ತು. ಸುಮ್ಮನೆ ನೌಕರನಿಂದೇಕೆ ಅವಮಾನಿಸಿದಿರಿ? ನಿಮ್ಮದೇನು ಹಾಳು ಮಾಡಿದ್ದೆ? " ಹೀಗೆ ಹೇಳುತ್ತ ಹೇಳುತ್ತ ಕುತ್ತಿಗೆ ಉಬ್ಬಿ ಬಂದಿತು.

" ನಾನು ಆಗ ಮಾಡಿದುದು ಒಳಿತಾಗಲಿಲ್ಲವೆಂದು ನನಗೇ ಅನಿಸಿತ್ತು. ಆದರೇನು ಮಾಡಲಿ? ಬುದ್ಧಿ ಬಂದಾಗ ಗಾಡಿ ಬಿಟ್ಟಿತ್ತು. ಕಾಲೀಪದನದೇನೂ ತಪ್ಪಿರಲಿಲ್ಲ, ಅವನ ಮೇಲೆ ಸಿಟ್ಟಾದುದು ನನ್ನದೇ ತಪ್ಪು." ಈರ್ಷೆ ಎಷ್ಟು ಕೆಟ್ಟ ವಸ್ತುವೆಂದು ನನಗೆ ಗೊತ್ತಿದೆ. ಇದು ತನ್ನೊಬ್ಬನನ್ನೇ ಹಾಳು ಮಾಡದೆ ಕಂಡಕಂಡವರ ಮೇಲೆಲ್ಲ ಹರಿಹಾಯ ಹಚ್ಚುತ್ತಿದೆ. ನಾನು ಮಾಡಿದ ಅಪರಾಧವಾದರೂ ಸಾಮಾನ್ಯವಾದುದಲ್ಲ. "

"ಅದರಲ್ಲಿ ನಿಮ್ಮದೇನು ತಪ್ಪು?"

"ಸುಮ್ಮಸುಮ್ಮನೆ ನನ್ನ ಅಪಮಾನವಾದುದರಿಂದ ನಿಮಗೆ ದುಃಖವಾಗಿದೆಯೆಂದು ನಿಮ್ಮ ಮಾತೇ ಹೇಳುತ್ತಿತ್ತು. ರಾಸಬಿಹಾರಿಯು ಕೆಳಗೆ ಬಂದು ನನ್ನನ್ನು ಸಮುದಾಯಿಸಿದ. ಆದರೂ ಅದರಿಂದ ದುಃಖವೇ ಹೆಚ್ಚಾಯಿತು. ನನ್ನ ತಲೆಯಲ್ಲೆಲ್ಲ ಅದೊಂದೇ ವಿಚಾರ. ಈ ೮-೧೦ ದಿನಗಳಲ್ಲಿ ದಿನದ ೨೪ ತಾಸುಗಳಲ್ಲಿ ೨೩ ತಾಸುಗಳನ್ನು ನಿಮ್ಮ ವಿಚಾರದಲ್ಲಿ—ನಿಮ್ಮ ಅಸ್ವಸ್ಥತೆಯ ಬಗ್ಗಾಗಿಯೇ ಯೋಚಿಸಿರುವೆ. ಅದಕ್ಕಾಗಿಯೇ ಈ ಈರ್ಷೆಯೆಂಬುದೊಂದು ಮಹಾರೋಗ. ಕೆಲಸವೆಲ್ಲ ಹಾಳಾಯಿತು, ಹಗಲಿರುಳೂ ನಿಮ್ಮದೇ ಯೋಚನೆ ತಲೆಯಲ್ಲಿ. ನಿಮ್ಮನ್ನೊಮ್ಮೆ ನೋಡುವ ಇಚ್ಛೆಯಿಂದಲೇ ಈ ಹಾದಿಯಿಂದ ಎರಡು ಮೂರು ಸಲ ತಿರುಗಾಡಿದೆ." ಎಂದು ನಗಹತ್ತಿದ.

ವಿಜಯೆ ಹೊರಗೆ ಹೋದಳು. ಇನ್ನೇನು ಅಪರಾಧ ಘಟಿಸಲಿದೆಯೋ ಎಂದು ನರೇಂದ್ರ ಯೋಚಿಸುತ್ತಿದ್ದ. ಅಷ್ಟೊತ್ತಿಗೆ ಆಳು ಬಂದು "ನಿಮ್ಮ ಊಟದ ವ್ಯವಸ್ಥೆಯಾಗುತ್ತಿದೆ. ನೀವೆಲ್ಲಿಯೂ ಹೋಗಬಾರದು" ಎಂದ.

"ನನಗೆ ಊಟಗೀಟದ ಅವಶ್ಯಕತೆ ಇಲ್ಲ."

"ಏನೇ ಇರಲಿ, ಯಜಮಾನತಿಯರು ಕೂದ್ರಲು ಹೇಳಿದ್ದಾರೆ." ಎಂದು ಹೇಳಿ ಆಳು ಹೊರಟುಹೋದ. ನರೇಂದ್ರನಿಗೆ ಇನ್ನೂ ಆಶ್ಚರ್ಯವಾಯಿತು.

ಸುಮಾರು ಹದಿನೈದು ನಿಮಿಷಗಳಲ್ಲಿ ಫಲಾಹಾರದ ತಟ್ಟೆಯನ್ನೂ, ಚಹವನ್ನೂ ತೆಗೆದುಕೊಂಡು ಬಂದಳು. ಆಕೆ ಅತ್ತು ಬಂತಿದ್ದಳೆಂದು ಯಾರು ಹೇಳುವಂತಿರದಿದ್ದರೂ, ನರೇಂದ್ರನು ಕಂಡುಹಿಡಿಯದೆ ಬಿಡಲಿಲ್ಲ.

ವಿಜಯೆ ಹತ್ತರದಲ್ಲಿಯೇ ಕುಳಿತಳು. ಆತ ತಿನ್ನುವದರಲ್ಲಿ ಮಗ್ನನಾದ.

ಐದಾರು ನಿಮಿಷ ಇದೇ ರೀತಿ ಗತಿಸಿತು. ಆಕೆಯೇ ಮಾತಿಗೆ ಆರಂಭಿಸಿದಳು. "ನಿಮ್ಮ ಮಾತು ಮುಂದುವರಿಯಲಿಲ್ಲವಲ್ಲ!" ಎಂದು ಹೇಳಿ ನಕ್ಕಳು.

ಆತ ಯಾವುದೋ ಯೋಚನೆಯಲ್ಲಿದ್ದ. "ಯಾವ ಮಾತು?"

"ಅದೇ ನನ್ನ ಯೋಚನೆಯ ರೋಗ."

ಆತ ಗಹಗಹಿಸಿ ನಕ್ಕ. "ಅದು ಬಿಟ್ಟು ಹೋಯಿತು."

ನಂತರ ಕೆಲ ಹೊತ್ತು ಸ್ತಬ್ಧತೆ. ನರೇಂದ್ರನು ಸಾವಕಾಶವಾಗಿ ಚಹವನ್ನು ಮುಗಿಸಿ ಕಪ್ಪನ್ನು ಮೇಜಿನ ಮೆಲೆ ಇಟ್ಟನು. ಹಾಗೂ ಗಡಿಯಾರ ತೆಗೆದು. "ಹತ್ತೇ ಮಿನಿಟು ಉಳಿಯಿತು. ನಾನು ಹೊರಟೆ" ಎಂದ.

"ಕಲಕತ್ತೆಗೆ ಹೋಗಲು ಇದೇ ಕೊನೆಯ ಗಾಡಿಯೇ?"

"ಇನ್ನೂ ಒಂದೇನೋ ಇದೆ. ಆದರೆ ಸುಮಾರು ೨||ಯ ನಂತರ. ಆಗಲಿ ಹೇಗಿಬರುವೆ. ನಮಸ್ಕಾರ" ಎಂದು ಹೇಳಿ ತೀವ್ರಗತಿಯಿಂದ ಹೊರಟು ಹೋದ.

೨೧

ವಿಲಾಸ ಸಕಾಲಕ್ಕೆ ಆಫೀಸಿಗೆ ಬಂದು ತನ್ನ ಕೆಲಸ ಮುಗಿಸಿ ಮನೆಗೆ ಹೋಗುತ್ತಿದ್ದ. ಅವಶ್ಯವೆನಿಸಿದರೆ ಮಾತ್ರ ಕ್ಲಾರ್ಕನ ಹತ್ತರ ಹೇಳಿ ವಿಜಯೆಯ ಅಭಿಪ್ರಾಯ ತರಿಸುತ್ತಿದ್ದ. ಆದರೆ ತಾನೆಂದೂ ಹೋಗುತ್ತಿರಲಿಲ್ಲ. ತಾನು ಕರೆಸಿದ ಹೊರತು ವಿಲಾಸನು ಬರುವಂತಿಲ್ಲವೆಂದು ವಿಜಯೆಗೂ ಮನವರಿಕೆಯಾಗಿತ್ತು. ಅಂತೂ ವಿಜಯೆಯ ಕೋಪ ಈಗ ಶಾಂತವಾಗಿತ್ತು. ಆದರೂ ತಾವು ಅಭಿನಯಿಸಿದ "ಆ ನಾಟಕ"ದ ನೆನಪಾಗಿ ನಾಚಿಕೆ ಪಟ್ಟು

ಕೊಳ್ಳುತ್ತಿದ್ದಳು. ಎಷ್ಟು ಮಂದಿ ಅದನ್ನು ಅರಿತು ನಗೆಚೇಷ್ಟೆ ಮಾಡುತ್ತಿದ್ದಾರೋ? ಎಂದುಕೊಳ್ಳುವಳು. ಇದರಿಂದ ಆಕೆಗೆ ಅನುತಾಪವೂ ಉಂಟಾಗುತ್ತಿತ್ತು. ಹೀಗೆಯೇ ಯೋಚಿಸುತ್ತ ಕುಳಿತಿದ್ದಾಗ ಒಮ್ಮೆ ನೌಕರನು ಬಂದು "ವಿಲಾಸಬಾಬುವು ಭೆಟ್ಟಿಯಾಗಲು ಕಾದಿದ್ದಾರೆ" ಎಂದನು.

ಇದೊಂದು ಹೊಸ ಸಮಸ್ಯೆ. ಆಕೆ ಪತ್ರ ಬರೆಯುತ್ತಿದ್ದಳು. ' ಬರಲು ಹೇಳು" ಎಂದಳು. ಆಕೆಯ ಮನಸ್ಸು ಅಜ್ಞಾತ ಭಯದಿಂದ ನಡುಗಹತ್ತಿತು. ಆದರೆ ವಿಲಾಸ ಬಂದೊಡನೆಯೇ ಎದ್ದು ಶಾಂತರೀತಿಯಿಂದ "ಬನ್ನಿ, ನಮಸ್ಕಾರ" ಎಂದಳು.

"ಕೆಲಸ ಹೆಚ್ಚು ಇರುವದರಿಂದ ಬರಲಾಗಲಿಲ್ಲ. ನಿಮ್ಮ ಪ್ರಕೃತಿಯು ನೆಟ್ಟಗಾಗಿರುವುದೇ?"

" ಹೌದು. "

"ಅದೇ ಔಷಧ ನಡೆದಿದೆಯೇ?"

ಆಕೆಯೂ ಉತ್ತರಕೊಡಲಿಲ್ಲ. ವಿಲಾಸನೂ ಇನ್ನೊಮ್ಮೆ ಕೇಳಲಿಲ್ಲ. ಆತ ಬೇರೆ ಸುದ್ದಿ ತೆಗೆದ.

"ನಾಳೆ ಹೊಸವರ್ಷದ ಆರಂಭ. ನಾಳೆ ಎಲ್ಲರನ್ನೂ ಕರೆಸಿ ತುಸು ಭಗವತ್ಸಂಬಂಧ ಸೇವೆ ನಡೆಸಬೇಕೆಂದು ವಿಚಾರವಿದೆ."

"ಒಳಿತಾಯಿತು."

"ಆದರೆ ಅನೇಕ ಕಾರಣಗಳಿಂದ ಮಂದಿರಕ್ಕೆ ಹೋಗಲು ಆಗಲಿಕ್ಕಿಲ್ಲ. ಇಲ್ಲಿಯೇ ಎಲ್ಲ ಸಿದ್ಧತೆಯಾದರೆ—"

ಆಕೆ ಕೂಡಲೇ ಒಪ್ಪಿದಳು. "ಹಾಗಾದರೆ ಇದನ್ನು ಸಿಂಗರಿಸಬೇಕಾಯಿತು. ನಿಮ್ಮಲ್ಲಿ ಹೂವಿಗೇನೂ ಕೊರತೆ ಇಲ್ಲ. ತೋಟಿಗನಿಗೆ ಹೇಳಿದರೆ ನಾಳೆ ಬೆಳಿಗ್ಗೇನೇ-ನಿಮ್ಮ ಅಭಿಪ್ರಾಯವೇನು? ಆಗಬಾರದೇಕೆ?"

ವಿಲಾಸ ವಿಶೇಷ ಆಡಂಬರವಿಲ್ಲದೆ "ಆದೀತು; ಹೀಗೆಯೇ ಆಗಲಿ. ನಾವೇ ಎಲ್ಲ ವ್ಯವಸ್ಥೆ ಮಾಡುವೆ."

" ಭಗವತ್ಸೇವೆಯ ಜೊತೆಗೆ ತಿನ್ನುಣ್ಣುವ ವ್ಯವಸ್ಥೆಯನ್ನೂ ಮಾಡಿದರೆ ನೆಟ್ಟಗಾಗುತ್ತಿತ್ತು."

ವಿಲಾಸ ಒಪ್ಪಿಕೊಂಡ. ಆ ಮೇಲೆ ಒಂದೆರಡು ಮಾತಾಡಿ ವಿಲಾಸ ಹೊರಟು ಹೋದ. ತಲೆಯ ಮೇಲಿನ ಹೊರೆಯೊಂದು ಕೆಳಗಿಳಿಸಿದಷ್ಟು ವಿಜಯೆಗೆ ಸಂತೋಷವಾಯಿತು. "ವಿಲಾಸನೆಷ್ಟು ದುರ್ಬಲನಾಗಿದ್ದಾನೆ. ನಿಜವಾಗಿಯೂ ಆತನಿಗೆ ಪಶ್ಚಾತ್ತಾಪವಾಗಿದೆ"ಯೆಂದು ಯೋಚಿಸಿಕೊಂಡಳು. ಆತನ ಬಗ್ಗೆ ಕರುಣೆ ಹುಟ್ಟಿತು.

ಮಾರನೇ ದಿನ ನಸುಕಿನಲ್ಲಿ ಎದ್ದಾಗ, ವಿಲಾಸನು ಮನೆಯನ್ನು ಸಿಂಗರಿಸುವುದರಲ್ಲಿ ತೊಡಗಿದ್ದಾನೆಂದು ತಿಳಿಯಿತು. ಆಕೆ ಬೇಗನೆ ಸಿಂಗರಿಸಿಕೊಂಡು "ನನ್ನನ್ನೇಕೆ ಕರೆಸಿಲ್ಲ" ಎಂದು ಕೇಳಿದಳು.

"ಆವಶ್ಯಕತೆ ಇರಲಿಲ್ಲ."

"ನಾನು ಇಂತಹ ಕೆಲಸದಲ್ಲಿಯೂ ಸಹಾಯ ಮಾಡಲಾರದಷ್ಟು ನಿರುಪಯೋಗಿಯೇ? ಇರಲಿ. ಈಗ ನನ್ನಿಂದೇನಾಗಬೇಕು ಹೇಳಿ.

"ನಮ್ಮ ಕೆಲಸ ಸರಿಯಾಗಿದೆಯೋ ಇಲ್ಲವೋ ಎಂದು ನೋಡಿಕೊಂಡರೆ ಸಾಕು."

"ಒಳ್ಳೇದು. ಇನ್ನು ಊಟೋಪಚಾರದ ವ್ಯವಸ್ಥೆ?"

"ಎಲ್ಲ ಸಿದ್ಧವಾಗಿದೆ. ಯಾವ ಕಾಳಜಿಯೂ ಬೇಡ."

"ಹಾಗಾದರೆ ನಾನು ಅಲ್ಲಿಯೇ ಹೋಗುತ್ತೇನೆ."

"ಒಳ್ಳೇದು, ಹೋಗಿರಿ" ಎಂದು ತನ್ನ ಕೆಲಸದಲ್ಲಿಯೇ ಮುಗ್ನನಾದ.

ಎಂಟು ಗಂಟೆಯೊಳಗಾಗಿಯೇ ಎಲ್ಲ ವ್ಯವಸ್ಥೆಯಾಯಿತು. ತನ್ಮಧ್ಯೆ ವಿಜಯೆ ಆಗಾಗ ಬಂದು ವಿಲಾಸನ ಸಲಹೆ ಪಡೆದು ಹೋಗಿದ್ದಾಳೆ. ಹಿಂದಿನ ಮತಭೇದ ಹೇಗೆ ಅಳಿಯಿತು ಎಂಬುದು ಯಾರಿಗೂ ಗೊತ್ತಾಗದಂತೆ ಸಹಜವಾಗಿ ಅವರ ಮಾತುಕತೆ ನಡೆದಿತ್ತು.

"ನಾನು ನಿರುಪಯೋಗಿಯೆಂದು ತಿಳಿದಿದ್ದಿರಲ್ಲ. ನೋಡಿ, ನಾನೂ ನಿಮ್ಮ ಒಂದು ತಪ್ಪು ಹಿಡಿದಿದ್ದೇನೆ" ವಿಜಯೆಯೆಂದಳು.

"ನಾನು ಹಾಗೆಂದೂ ತಿಳಿದಿರಲಿಲ್ಲ. ಆದರೆ ನನ್ನಿಂದ ಘಟಿಸಿದ ತಪ್ಪಾವುದು?"

"ನಾವಿರುವವರು ನಾಲ್ಕೈದೇ ಮಂದಿ. ಆದರೆ ಒಳಗೆ ಸುಮಾರು ೨೫ ಮಂದಿಯ ವ್ಯವಸ್ಥೆಯಾಗಿದೆಯಲ್ಲ?"

" ಹಾಗೆ ಆಗಲೇ ಬೇಕು. ತಂದೆಯವರು ತಮ್ಮ ಗೆಳೆಯರಿಗೆಲ್ಲ ಆಮಂತ್ರಿಸಿದ್ದಾರೆ. ಆದರೆ ಅವರಲ್ಲಿ ಯಾರ್ಯಾರು ಬರುವರೆಂದು ನಿಶ್ಚಿತವಾಗಿ ಹೇಳಲಾರೆ"

" ಇದಂತೂ ನನ್ನೊಡನೆ ಹೇಳಲೇ ಇಲ್ಲವಲ್ಲ! "

" ನಾನು ಹೋದ ಬಳಿಕ ನಮ್ಮ ತಂದೆಯವರು ನಿಮಗೆ ಇದರ ಬಗ್ಗೆ ತಿಳಿಸಿಲ್ಲವೇ? "

" ಇಲ್ಲ. "

" ನಾನು ತಿಳಿಸುವೆನೆಂದು ನನಗೆ ಹೇಳಿದ್ದ. "

" ಏನೆಂದು ಹೇಳಿದ್ದರು? "

" ನಾನು ಕೇಳಿದ್ದು ತಪ್ಪಿರಬೇಕು. ಇಲ್ಲವೆ ಅವರು ಹೇಳಿದ್ದು ಮರೆತಿರಬೇಕು."

ವಿಜಯೆ ಇನ್ನೇನೂ ಕೇಳಲಿಲ್ಲ. ಆದರೆ ಆಕೆಯ ಅಂತರ್ಯದ ಬೆಳದಿಂಗಳಿಗೆ ಮೋಡ ಕವಿದಂತಾಯಿತು.

ಸುಮಾರು ಅರ್ಧ ತಾಸಿನಲ್ಲಿ ರಾಸಬಿಹಾರಿ ಬಂದ. ಹಾಗೂ ಒಂಬತ್ತರೊಳಗಾಗಿ ಒಬ್ಬೊಬ್ಬರಾಗಿ ಅತಿಥಿಗಳು ಬರಹತ್ತಿದರು. ಬಂದವರೆಲ್ಲ ಬ್ರಾಹ್ಮ ಸಮಾಜದವರೇ ಇದ್ದಿಲ್ಲ. ರಾಸಬಿಹಾರಿಯ ಮಾತು ಮೀರಲಾರದೆ ಬಂದವರೂ ಕೆಲವರಿದ್ದರು.

ರಾಸಬಿಹಾರಿಯು ಎಲ್ಲರನ್ನೂ ಸ್ವಾಗತಿಸಿ, ವಿಜಯೆಯ ಪರಿಚಯವನ್ನೂ ಮಾಡಿಕೊಟ್ಟ. ಅಲ್ಲದೆ ವಿಜಯೆಯೊಡನೆ ವಿಲಾಸನ ಶರೀರಸಂಬಂಧವಾಗಲಿದೆಯೆಂಬ ಮಾತನ್ನು ಹೇಳಲೂ ಮರೆಯಲಿಲ್ಲ. ಅವರಿಗೆ ಕುಳಿತುಕೊಳ್ಳಲು ವಿಜಯೆ ಕೇಳಿಕೊಂಡಳು. ಅಷ್ಟರಲ್ಲಿಯೇ ದಯಾಲಬಾಬುವು ಕಣ್ಣಿಗೆ ಬಿದ್ದರು. ಅವರ ಜೊತೆಗೆ ಇನ್ನೊಬ್ಬ ತರುಣಿಯೂ ಬರುತ್ತಿದ್ದಳು. ಹುಡುಗಿ ರೂಪವತಿ. ವಯಸ್ಸಿನಿಂದ ವಿಜಯೆಗಿಂತ ತುಸು ಹಿರಿಯಳಾಗಬಹುದು. ತನ್ನ ಅಣ್ಣನ ಮಗಳೆಂದು ದಯಾಲರು ಪರಿಚಯ ಮಾಡಿಕೊಟ್ಟರು. ಆಕೆಯ ಹೆಸರು ನಲಿನಿ. ಕಲಕತ್ತೆಯ ಕಾಲೇಜಿನಲ್ಲಿ B. A. ಕ್ಲಾಸಿನಲ್ಲಿ ಓದುತ್ತಿದ್ದಳು. ಇನ್ನೂ ರಜೆ ಬಿದ್ದಿರಲಿಲ್ಲ. ಚಿಗವ್ವೆಯ ಸೇವೆ

ಗಾಗಿ ಮೊದಲೇ ಬಂದಿದ್ದಳು. ಬರಲಿರುವ ರಜೆಯನ್ನು ಇಲ್ಲಿಯೇ ಕಳೆಯ ಬೇಕೆಂದು ಈಗ ನಿರ್ಧರಿಸಿಕೊಂಡಿದ್ದಳು.

ಕಲಕತ್ತೆಯಲ್ಲಿ ನಲಿನಿಯನ್ನು ವಿಜಯೆ ನೋಡಿರಲಿಲ್ಲವೆಂದಲ್ಲ. ಮಾತು ಕತೆಯಾಗಿರಲಿಲ್ಲ. ಆದರೂ ಆ ಎಲ್ಲ ಜನರಲ್ಲಿ ಆಕೆಯೊಬ್ಬಳೇ ಆತ್ಮೀಯ ಳೆಂದು ಅನಿಸಿತು. ವಿಜಯೆ ಆಕೆಯನ್ನು ಸ್ವಾಗತಿಸಿ, ಜೊತೆಯಲ್ಲಿ ಕೂಡ್ರಿಸಿ ಕೊಂಡು ಸಂಭಾಷಣೆಯಲ್ಲಿ ತಲ್ಲೀನಳಾದಳು.

ಉಪಾಸನೆ ೬॥ಘಂಟೆಗೆ ಆರಂಭವಾಗುವದೆಂದು ನಿಶ್ಚಯಿಸಿತ್ತು. ತುಸು ಅವಕಾಶವಿದ್ದುದರಿಂದ ಜನರೆಲ್ಲ ಹೊರಗಿನ ಚೌಕಿಯಲ್ಲಿ ನಿಂತು ಮಾತಾಡು ತ್ತಿದ್ದರು. ಅಷ್ಟೊತ್ತಿಗೆ ಒಳಗಿನಿಂದ ರಾಸಬಿಹಾರಿಯ ಗಂಟಲು ಕೇಳಿಸಿತು. ಅವರಲ್ಲಿ ಯಾರನ್ನೋ ಆದರಪೂರ್ವಕವಾಗಿ "ಬಾ. ನಿನಗೆ ಪುರಸೊತ್ತಿಲ್ಲ ದಿದ್ದರೂ ಬರುವಿಯೆಂದು ತಿಳಿದಿರಲಿಲ್ಲ" ಎಂದು ಉಪಚಾರ ಮಾಡು ತ್ತಿದ್ದರು.

ಈತ ಬೇರಾರೂ ಆಗಿರದೆ ನರೇಂದ್ರನಾಗಿದ್ದ. ಆದರೂ ವಿಜಯೆಗೆ ಒಮ್ಮೆಲೇ ವಿಶ್ವಾಸ ಹುಟ್ಟಲಿಲ್ಲ. ನಲಿನಿ ಆತನ ಹೆಸರಿನಿಂದ ಕೂಗಿಯೇ ಬಿಟ್ಟಳು.

ರಾಸಬಿಹಾರಿ ಈತನನ್ನೇಕೆ ಕರೆಸಿರಬಹುದೆಂಬುದು ಎಷ್ಟು ಯೋಚಿಸಿ ದರೂ ವಿಜಯೆಗೆ ಹೊಳೆಯಲಿಲ್ಲ. ಕೆಲಹೊತ್ತಿನಲ್ಲಿಯೇ ರಾಸಬಿಹಾರಿ ಇಬ್ಬರನ್ನೂ ಕರೆದುಕೊಂಡು ಒಳಹೊಕ್ಕ, ಆತನ ಹಿಂದಿಂದೇ ಅನೇಕ ಜನರು ಬಂದಿದರು. ಆ ಮೇಲೆ ವೃದ್ಧನು ಆ ಎರಡೂ ಯುವಕರನ್ನು ಕರೆದು "ಮಕ್ಕಳಿರಾ, ನಿಮ್ಮ ತಂದೆಯ ದೃಷ್ಟಿಯಿಂದ ನೋಡಿದಾಗ ನೀವಿಬ್ಬರು ಅಣ್ಣತಮ್ಮಂದಿರು. ವನವೀರನೂ ಇಲ್ಲ. ಜಗದೀಶನೂ ಹೋಗಿ ಬಿಟ್ಟ. ನನ್ನ ಬಾರಿಯೂ ಬರುವದರಲ್ಲಿದೆ. ನಾವು ಎಷ್ಟು ಅನ್ಯೋನ್ಯವಾಗಿದ್ದೆವೆಂಬು ದನ್ನು ನೀವು ಊಹಿಸಲಾರಿರಿ. ಈ ನವೀನ ವರ್ಷದ ಮಂಗಳ ಪ್ರಭಾತದಲ್ಲಿ, ನಿಮ್ಮ ಮತಭೇಧದಿಂದ ಈ ಮುದುಕನಿಗೆ ತೊಂದರೆ ಕೊಡಬೇಡಿರಿ" ಎಂದ. ಕೊನೆಯ ಮಾತು ಹೇಳುವಾಗ ಕುತ್ತಿಗೆ ಉಬ್ಬಿ ಬಂದಿತು. ನರೇಂದ್ರನಿಂದ ನೋಡಲಾಗಲಿಲ್ಲ. ಆತ ಒಂದು ಹೆಜ್ಜೆ ಮುಂದಿಟ್ಟು ವಿಲಾಸನ ಕೈಹಿಡಿದು "ವಿಲಾಸ, ನನ್ನ ಎಲ್ಲ ಅಪರಾಧವನ್ನೂ ಹೊಟ್ಟೆಯಲ್ಲಿ ಹಾಕಿಕೋ. ನಾನು ಕ್ಷಮೆ ಬೇಡುತ್ತೇನೆ" ಎಂದನು.

"ನಾನೇ ಅಪರಾಧಿ. ನನ್ನನ್ನು ಕ್ಷಮಿಸು. ನರೇಂದ್ರ" ಎಂದು ವಿಲಾಸ ಅವನನ್ನು ಆಲಂಗಿಸಿದ.

ರಾಸಬಿಹಾರಿಯು ಕಣ್ಣುಮುಚ್ಚಿ ನಡುಗುವ ಕೋಮಲ ದನಿಯಿಂದ "ಎಲೈ ಸರ್ವಶಕ್ತಿವಂತನಾದ ಪರಮೇಶ್ವರನೇ, ನಿನ್ನ ಈ ಕಾರುಣ್ಯಕ್ಕಾಗಿ ನಿನ್ನ ಪಾದತಲದಲ್ಲಿ ಕೋಟಿ ನಮಸ್ಕಾರಗಳು" ಎಂದು ಭಯಭಕ್ತಿಯಿಂದ ಕೈಜೋಡಿಸಿದ. ಆ ಮೇಲೆ ತುಸು ತಡೆದು "ಇಂದಿನ ಶುಭಮುಹೂರ್ತದಲ್ಲಿ ನಿಮ್ಮಿಬ್ಬರ ಜೀವನ ಸಾರ್ಥಕವಾಗಲಿ. ಅಭ್ಯಾಗತರೇ ಇವರನ್ನು ಹರಸಿರಿ" ಎಂದು ಕೇಳಿಕೊಂಡನು.

ದಯಾಲನ ಹೊರತು ಈ ಕತೆ ಯಾರಿಗೂ ಗೊತ್ತಿರದ್ದರಿಂದ ಅವರೆಲ್ಲ ಚಕಿತರಾದರು. ರಾಸಬಿಹಾರಿಗೆ ಗೊತ್ತಾಯಿತು. "ಇವರಿಬ್ಬರೂ ನನ್ನ ಎರಡು ಕಣ್ಣುಗಳಿದ್ದಂತೆ. ಯಾವ ಕಣ್ಣಿಗೆ ಹಾನಿಯಾದರೂ ನನಗೇ ನೋವಾಗುತ್ತಿದೆ. ತಮ್ಮೆಲ್ಲರ ಕೃಪೆಯಿಂದ ನನ್ನ ಜೀವನದಲ್ಲಿ ಇಂದಿನದು ಶುಭ ಮುಹೂರ್ತ. ಇನ್ನೇನೆನ್ನಲಿ."

ಒಳಗಿನ ಕಾರಣ ಗೊತ್ತಾಗದಿದ್ದರೂ ಎಲ್ಲರೂ ಹರ್ಷವನ್ನು ಮಾತ್ರ ಸೂಚಿಸಲು ತಪ್ಪಲಿಲ್ಲ.

ಆತನ ಹೃದಯ ತುಂಬಿ ಬಂದಿದೆಯೆಂದು ಬಂದ ಜನರೆಲ್ಲ ತಿಳಿದು ಕೊಂಡರು. ದಯಾಲಬಾಬುವು ತನ್ನ ನರೆತ ಗಡ್ಡದ ಮೇಲೆ ಕೈಯಾಡಿಸುತ್ತ ಎದ್ದು ನಿಂತು ಭಗವತ್‌ಪ್ರಾರ್ಥನೆಗೆ ಪೀಠಿಕೆಯ ಸ್ವರೂಪವಾಗಿ "ವಿರುದ್ಧ ಹೃದಯಗಳು ಕೂಡುವೆಡೆಯಲ್ಲಿ ಪರಮಾತ್ಮನಿದ್ದಾನೆ. ಈ ಸ್ನೇಹ ಸಮ್ಮೇಲನ ರೂಪುಗೊಂಡ ತಾಣದಲ್ಲಿ ನಿಜವಾಗಿಯೂ ಪರಮಾತ್ಮನಿದ್ದಾನೆ" ಎಂದ.

ಆ ಮೇಲೆ ಹದಿನೈದು ನಿಮಿಷ ಸುಶ್ರಾವ್ಯವಾಗಿ ಪ್ರಾರ್ಥನೆ ನಡೆಯಿತು. ಆತನ ಹೃದಯ ಸರಳತೆ ವಿಸ್ವಾಸ ಹಾಗೂ ಆಂತರಿಕ ಭಕ್ತಿಯಿಂದ ಓತಪ್ರೋತವಾಗಿತ್ತು. ಆ ದೃಶ್ಯ ಹೃದಯಸ್ಪರ್ಶಿಯಾಗಿತ್ತು. ರಾಸಬಿಹಾರಿಯ ಕಣ್ಣಿಂದಲೇ ಒಂದೆರಡು ಹನಿ ನೀರುದುರಿತು. ಉಪಾಸನೆ ಮುಗಿದನಂತರವೂ ಅವರು ಹಾಗೆಯೇ ಕುಳಿತಿದ್ದರು. ಅವರು ಸಚೇತನರಾಗಿದ್ದರೋ, ಅಚೇತನರಾಗಿದ್ದರೋ ಎಂದು ಹೇಳುವುದೂ ಕಷ್ಟ.

ಒಬ್ಬಳ ಮನಸ್ಸಿನಲ್ಲಿ ಏನಾಗುತ್ತಿದೆಯೆಂದು ಹೇಳುವುದು ಮಾತ್ರ ಕಷ್ಟ. ಆಕೆಯೇ ವಿಜಯೆ. ಆಕೆ ಅಷ್ಟು ಹೊತ್ತು ತಲೆಬಾಗಿಸಿ ಕಲ್ಲಿನ ಪ್ರತಿಮೆಯಂತೆ ಕುಳಿತಿದ್ದಳು. ಆಕೆ ತಲೆಯೆತ್ತಿದಾಗ ಮೋರೆ ಕಾಂತಿ ಹೀನ ವಾಗಿದ್ದಿತು.

ಗದ್ಗದ ಕಂಠದಿಂದ ರಾಸಬಿಹಾರಿಯು ಎಲ್ಲರ ಆಭಾರ ಮನ್ನಿಸಿ ದಯಾಲನನ್ನು ಕೊಂಡಾಡಿದನು. ಹತ್ತಿರದ ಕೋಣೆಯಲ್ಲಿ ಫಲಾಹಾರದ ಏರ್ಪಾಟು ನಡೆದಿತ್ತು. ವಿಲಾಸನು ಸನ್ನೆ ಮಾಡಲು ರಾಸಬಿಹಾರಿಯು ಜನತೆಯನ್ನುದ್ದೇಶಿಸಿ "ಇನ್ನೊಂದು ವಿಷಯವಾಗಿಯೂ ತಮ್ಮ ಆಶೀರ್ವಾದ ವನ್ನು ಬೇಡುತ್ತೇನೆ. ವನವೀರನಿದ್ದಿದ್ದರೆ ಈ ಸುದ್ದಿ ನಾನಾಗಿ ಹೇಳುವ ಅವಶ್ಯಕತೆ ಇರಲಿಲ್ಲ. ಈ ತಿಂಗಳ ಕೊನೆಯ ವಾರದಲ್ಲಿ ವಿಜಯಾ ವಿಲಾಸರ ವಿವಾಹವಾಗುವದಿದೆ. ಅದು ನಿರ್ವಿಘ್ನವಾಗಿ ಪೂರ್ತಿಯಾಗುವಂತೆ ತಾವೆಲ್ಲ ಹೃತ್ಪೂರ್ವಕವಾಗಿ ಹರಸಬೇಕು" ಎಂದು ಕೇಳಿಕೊಂಡು ಭಂಗಾರದ ಬಳೆ ಯನ್ನು ದಯಾಲನ ಕೈಗೆ ತೊಡಿಸಿದನು.

ಆತ ಅದನ್ನು ಆಶೀರ್ವಾದದ ಕಾಣಿಕೆಯೆಂದು ಮೂರ್ಛಿತಪ್ರಾಯ ಳಾಗಿ ಕುಳಿತ ವಿಜಯೆಯ ಕೈಗೆ ತೊಡಿಸಿದನು. ಸಭೆಯಲ್ಲೆಲ್ಲ ಸಂತೋಷದ ನಗೆ ತುಳುಕಿತು.

ಫಲಾಹಾರ ಮುಗಿಯಿತು. ರಾತ್ರಿಯಾಗುತ್ತಿದ್ದುದರಿಂದ ಒಬ್ಬೊಬ್ಬ ರಾಗಿ ಹೋಗಹತ್ತಿದರು. ವಿಜಯೆ ಅವರನ್ನೆಲ್ಲ ಹೇಗೆ ಬೀಳ್ಕೊಟ್ಟಳೆಂಬು ದನ್ನೂ—ಅದರಲ್ಲಾವ ವ್ಯತ್ಯಯ ಬಾರದಂತೆ ನೋಡಿಕೊಂಡಳೆಂಬುದನ್ನೂ ಆಕೆಯ ಅಂತರ್ಯಕ್ಕೊಂದು ಗೊತ್ತು. ಇದನ್ನು ರಾಸಬಿಹಾರಿ ಕಂಡುಹಿಡಿ ದಿದ್ದ. ಆದರೆ ಯಾರಮುಂದೂ ಈ ಮಾತು ಒಡೆಯಲಿಲ್ಲ. "ನಾನು ಮುದುಕ. ಬಿಸಿಲಾದರೆ ಹೋಗಲಿಕ್ಕಾಗುವದಿಲ್ಲ" ಎಂದು ಆಶೀರ್ವದಿಸಿ ಹೊರಟು ಹೋದ.

ಎಲ್ಲರೂ ಹೋದರು. ನಲಿನಿ ಹಾಗೂ ವಿಜಯೆಯರು ಹೊಸ್ತಿಲಲ್ಲಿ ನಿಂತು ಸಂಭಾಷಣೆಯಲ್ಲಿ ತೊಡಗಿದ್ದರು.

ನಿಮ್ಮನ್ನು ಕಂಡು ನನಗೆ ತುಂಬ ಸಂತೋಷವಾಯಿತು. ಇಲ್ಲಿ ಬಂದಂದಿನಿಂದ ನನಗಾರೂ ಜೊತೆಗಿಲ್ಲ. ಎರಡು ಮಾತಾಡುವಾ ಎಂದರೆ

ಯಾರೂ ಇಲ್ಲ! ನಿಮಗೆ ಇಚ್ಛೆಯಾದಾಗಲೆಲ್ಲ—ಸಮಯ ಸಿಕ್ಕಾಗಲೆಲ್ಲ ಇಲ್ಲಿ ಬರುತ್ತಾ ಇರ್ರಿ" ಎಂದು ವಿಜಯೆಯೆಂದಳು.

ನಲಿನಿ ಒಪ್ಪಿಕೊಂಡಳು. "ನಾನು ನರೇಂದ್ರನ ದಾರಿ ಕಾಯುತ್ತಿದ್ದೇನೆ. ಅವರು ತಮ್ಮ ಮಾವನ ಭೆಟ್ಟಿಗೆ ಹೋಗಿದ್ದಾರೆ. ಈಗ ತಾನೇ ಬರಬಹುದು"

ವಿಜಯೆಗೆ ಆಶ್ಚರ್ಯವಾಯಿತು. "ನಿಮಗೆ ಅವರ ಪರಿಚಯವಿರುವುದೇ? ನನಗೆ ಗೊತ್ತೇ ಇರಲಿಲ್ಲ."

'ಹಿಂದಿನ ಪರಿಚಯವಿರಲಿಲ್ಲ, ಮಾವನ ಹೇಳಿಕೆಯಂತೆ ಸ್ಟೇಶನ್ನಿಗೆ ಹೋಗಿದ್ದೆ. ಬರುವಾಗ ಸಂಗಡಲೇ ಬಂದೆವು."

"ಹೀಗೋ, ಹಾಗಾದರೆ"

"ಆತನೆಂತಹ ವಿಚಿತ್ರ ಪ್ರಾಣಿ ಬಲ್ಲಿರಾ? ಒಂದೆರಡು ದಿನದಲ್ಲಿಯೇ ಆತ್ಮೀಯನಾಗಿ ಬಿಡುತ್ತಾನೆ. ಈ ಹೊತ್ತು ನಮ್ಮಲ್ಲಿ ಊಟ ಮಾಡಿ ಕಲಕತ್ತೆಗೆ ಹೋಗಲಿದ್ದಾರೆ. ನಮ್ಮ ಚಿಗವ್ವಿಯಂತೂ ಮಗನಂತೆಯೇ ನೋಡಿಕೊಂಡಿದ್ದಾಳೆ.

"ನಿಜ. ನಿಜ. ಅದೊಂದು ಆಶ್ಚರ್ಯಕಾರಕ ಪ್ರಾಣಿ."

"ಅಂತಹ ಪ್ರಾಣಿ ಯಾರೊಡನೆಯಾದರೂ ಜಗಳ ಮಾಡಬಹುದೆಂದು ನನಗನಿಸುವದಿಲ್ಲ. ಈ ಹೊತ್ತು ವಿಲಾಸನೊಡನೆ ಅವನ ಮೈತ್ರಿ ಕೂಡಿ ಬಂದಿತು. ನಮ್ಮ ಸಮಾಜದವರೆಲ್ಲ ಅವನಂತೆ ಆಗಲು ಯತ್ನಿಸಬೇಕು. ರಾಸಬಿಹಾರಿಯಂತಹರು ನಮ್ಮ ಸಮಾಜದಲ್ಲಿದ್ದಷ್ಟೂ ನಮ್ಮ ಸಮಾಜಕ್ಕೆ ಹೆಮ್ಮೆ! ಭೂಷಣ."

ನರೇಂದ್ರ ಕೈಯಲ್ಲಿ ಟೊಪ್ಪಿಗೆ ಹಿಡಿದುಕೊಂಡು ವೇಗವಾಗಿ ಬರುತ್ತಿದ್ದ. ವಿಜಯೆಯು ನಲಿನಿಯ ಪ್ರಶ್ನೆಗೆ ಉತ್ತರ ಕೊಡದೆ "ಅದೋ ಬಂದೇ ಬಿಟ್ಟರು" ಎಂದಳು.

"ಇದೇನು? ಎಷ್ಟು ಬೇಗ ನಿಮ್ಮಲ್ಲಿ ಗೆಳೆತನ ಬೆಳೆಯಿತು. ಇಂದಿನ ಹೊಸದಿನ ನಮ್ಮೆಲ್ಲರ ಸೌಭಾಗ್ಯದ ದಿನ. ಇಂದಿನ ಬೆಳಗು ಸುಖದಲ್ಲಿ ಕಳೆಯಿತು. ಅದರಂತೆಯೇ ಈ ವರ್ಷವೂ ಕಳೆಯಬಹುದೆಂದೆನಿಸುತ್ತದೆ. ಆದರೆ ನಿಮ್ಮ ಮೋರೆಯೇಕೆ ಮಲಿನವಾಗಿದೆ?

"ದಿನಕ್ಕೆಷ್ಟು ಸಲ ಈ ಪ್ರಶ್ನೆ ಕೇಳುವಿರಿ?"

"ಕೇಳಿದರೇನು ತಪ್ಪು? ಇಂತಹ ಮಾತಿಗೆಲ್ಲ ನೀವು ಹೀಗೆ ರೇಗಿದರೆ ಹೇಗೆ? ಇದು ನಿಮ್ಮಲ್ಲಿರುವ ದೊಡ್ಡ ದೋಷ." ಎಂದವನೇ ನಗ ಹತ್ತಿದ.

" ವಿಜಯೆಗೆ ನಗೆ ಬಂದರೂ ತಡೆದುಕೊಂಡಳು. " ಈ ವಿಷಯದಲ್ಲಿ ಎಲ್ಲರೂ ನಿಮ್ಮಂತೆ ನಿರ್ದೋಷರಾಗಿರಲು ಸಾಧ್ಯವಿಲ್ಲ. ನಿಮ್ಮಂತಹ ರಿಗಾದರೂ ಕಾಲೀಪದನಂತವರು ಸಿಟ್ಟಿನ ಮೂರ್ತಿಯೆನ್ನುತ್ತಾರೆ. "

ಅವನ ಹೆಸರು ಕೇಳಿದೊಡನೆ ಗಹಗಹಿಸಿ ನಕ್ಕ. "ಕಾಲೀಪದ, ನೀವು, ಇನ್ನಾರು ಇದ್ದಾರೆ. ಹೇಳಿ ನೋಡುವಾ."

" ಸ್ಟೇಶನ್ನಿನಲ್ಲಿ ನಿಮ್ಮ ರೀತಿ ನೋಡಿದವರೆಲ್ಲರೂ ಅದೇ ಅಭಿಪ್ರಾಯ ದವರು "

" ಇನ್ನೂ ಇದ್ದಾರೆಯೇ ?"

" ಅಹುದು. ಅದನ್ನು ಕೇಳಿದವರೆಲ್ಲ. "

" ಹೀಗೆ ಸುತ್ತಿ ಸುತ್ತಿ ಹೇಳುವುದನ್ನು ಬಿಟ್ಟು ಇಡೀ ಜಗತ್ತೇ ಬಲ್ಲು ದೆಂದರಾಗದೆ ? "

" ಹೌದು. ನಾವೆಲ್ಲರೂ ಹಾಗೆಯೇ ತಿಳಿದಿದ್ದೇವೆ. "

" ಹಾಗಾದರೆ ನಿಮಗೆ ಧನ್ಯವಾದ. ಆದರೆ ನಿಮ್ಮ ಬಗ್ಗೆ ಜನರೇನನ್ನು ತ್ತಾರೆ. ಹೇಳಿ ನೋಡುವಾ" ಎಂದವನೇ ನಕ್ಕ.

" ನಮ್ಮನ್ನು ನಾವೇ ಹೊಗಳಿಕೊಳ್ಳುವುದು ಹೇಗೆ? ನೀವೇ ಹೇಳಿ. ಆದರೆ ಈಗ ಬೇಡ. ಮೊದಲು ಊಟವಾಗಲಿ."

" ಚಿಗವ್ವೆ ಹಾದಿ ಕಾಯುತ್ತಿರಬಹುದು " ಎಂದಳು ನಲಿನಿ.

" ನಮ್ಮ ಆಳು ಕಳಿಸುತ್ತೇನೆ. ಅದರ ಕಾಳಜಿ ಬೇಡ."

" ನಾನು ಹೋಗಲೇ ಬೇಕಾದೀತು. ಮನೆಯಲ್ಲಾರೂ ಇಲ್ಲ. ಆಕೆಗೂ ಅಸ್ವಸ್ಥತೆ. "

ವಿಜಯೆ ಒತ್ತಾಯ ಮಾಡಲಿಲ್ಲ. ಆದರೆ ನಲಿನಿಗೆ ಮಾತ್ರ ಏನೆನಿಸಿತೊ ಏನೋ. " ನರೇಂದ್ರರಾಯರೇ, ನೀವು ಇಲ್ಲಿಯೇ ಇರ್ರಿ. ನಾನು ಸುದ್ದೀ ಮುಟ್ಟಿಸುವೆ. ಹೋಗುವಾಗ ಬಂದು ಹೋಗಿರಿ. ಅಷ್ಟೇ ! "

" ನಿಮ್ಮನ್ನು ಈ ಬಿಸಿಲಲ್ಲಿ ಕಳಿಸುವಷ್ಟು ಕೃತಘ್ನನೆಂದು ಭಾವಿಸು ವಿರಾ? ವಿಜಯಾ, ನಿಮ್ಮಲ್ಲೊಮ್ಮೆ ಕಂಟಮುಟ ಹೊಡೆಯುವ ದಿನವಿದ್ದೇ ಇದೆ. ನಲಿನೀ, ಹೋಗೋಣ ಬಾ " ಎಂದವನೇ ಟೊಪ್ಪಿಗೆಯೆನ್ನೆತ್ತಿಕೊಂಡೆ.

ವಿಜಯೆಗೆ ಮಾತ್ರ ತುಂಬ ದುಃಖವಾಗಿತ್ತು. ಇದನ್ನು ನರೇಂ
ಗಮನಿಸಲಿಲ್ಲ. ಆತ ಮತ್ತೊಮ್ಮೆ ನಕ್ಕು "ಇಂದಿನ ಶುಭಮುಹೂರ್ತದ
ಎಲ್ಲ ದುಃಖಕ್ಕೆ ಕಾರಣವಾದ ಆ ಯಂತ್ರವನ್ನಷ್ಟು ಕಾಣಿಕೆಯಾಗಿ ಕೊಟ
ಬಿಡಿ. ಹಣ ಯಾವಾಗಲಾದರೊಮ್ಮೆ ಕಳಿಸುವೆ" ಎಂದು ನುಡಿದ. ಆಕೆ
ಶಲ್ಯದಂತೆ ಇರಿಯಿತು ಈ ಮಾತು.

"ಕಾಣಿಕೆಗೆ ಬೆಲೆ ಯಾರೂ ತೆಗೆದುಕೊಳ್ಳುವದಿಲ್ಲ. ಅದು ಮಾರಾಟ
ಈ ಪುಣ್ಯ ದಿನದಲ್ಲಿ ನಾನು ಮಾರಾಟ ಮಾಡಲು ಬಯಸುವದಿಲ್ಲ"

"ನನ್ನ ಆಶಯ ಹಾಗಿರಲಿಲ್ಲ. ನನ್ನ ಜೀವನದಲ್ಲಿ ಮುಚ್ಚುಮ
ಯೆಂಬುದು ಇಲ್ಲ. ಈ ನಲಿನಿಗೂ ಗೊತ್ತು."

ವಿಜಯೆಗೆ ತುಂಬ ದುಃಖವಾಯಿತು. ಇಂತಹ ಸರಳ ಪ್ರಾಣಿಯನ್ನು
ಸುಮ್ಮನೆ ಕಟುಮಾತಿನಿಂದ ತೊಂದರೆ ಕೊಟ್ಟೆನಲ್ಲ ಎಂದೆನಿಸಿತು. ನರೇಂದ್ರನೆ
ಆಕೆಯನ್ನು ಸಾಂತ್ವನಗೊಳಿಸುವದಕ್ಕಾಗಿ ನುಡಿದ.

"ನನ್ನ ಮಾತಿನಿಂದ ತಮಗೆ ಬೇಸರವಾಗಿರಬಹುದು. ಹಾಗೇನಾ
ದರೂ ಆಗಿದ್ದರೆ ಕ್ಷಮಿಸಿರಿ" ಎಂದು ಹೊರಟು ಹೋದ.

೨೨

ಹಾದಿಯಲ್ಲೆಲ್ಲ ಇವರಿಬ್ಬರದೇ ಮಾತು. ಕೊನೆಗೆ "ಯಂತ್ರದ ವಿಷಯ
ಇನ್ನೊಮ್ಮೆ ಹೇಳುವೆ. ನನ್ನನ್ನು ಕ್ಷಮಿಸಿ. ನಾನು ಇದೀಗಲೇ ಹೋಗ
ಬೇಕಾಗಿದೆ. ನಾನು ಎಂದಾದರೊಮ್ಮೆ ನಿಮ್ಮ ಚಿಗವ್ವೆಯನ್ನು ಕಾಣಲು
ಬರುವೆ." ಎಂದವನೇ ಆ ಬಿಸಿಲಿನಲ್ಲಿ ತೀವ್ರಗತಿಯಿಂದ ಸ್ಟೇಶನ್ನಿನತ್ತ
ಹೊರಟ.

ಮೈದಾನು ದಾಟುವುದಕ್ಕೆ ಕೆಲವು ಅಂತರವಿರುವಷ್ಟರಲ್ಲಿ, ಒಬ್ಬ
ಹುಡುಗ ತನ್ನೆಡೆಗೇ ತೀವ್ರವಾಗಿ ಧಾವಿಸುತ್ತ ಬರುವುದನ್ನು ಕಂಡ. ನರೇಂದ್ರ
ತಡೆದ. ಪರೇಶ ಬಂದವನೇ "ಒಡತಿಯರು ಕರೆದಿದ್ದಾರೆ. ಹೂಂ. ಬನ್ನಿ
ಹೊರಡಿ" ಎಂದು ಒಂದೇ ಉಸುರಿಗೆ ಹೇಳಿದ.

"ನನಗೆ?"

"ಹೂಂ"

"ಯಾರಿಗೆ ಕರೆದರೋ ಏನೋ, ನನಗಿರಲಿಕ್ಕಿಲ್ಲ. ಹೋಗೋ?"

"ತಲೆ ಮೇಲೆ ಹ್ಯಾಟ ಇದ್ದವರು ನೀವೇ ಅಲ್ಲವೇ? ನಿಮಗೇ ಕರೆದದ್ದು. ಹೂಂ."

ಕೆಲಹೊತ್ತು ಸುಮ್ಮನೆ ನಿಂತ. "ಇನ್ನೂ ಏನೇನು ಹೇಳಿದ್ದಾಳೆ?"

"ಒಡತಿ ಮಾಳಿಗೆ ಮೇಲಿನಿಂದ ಒಮ್ಮೆಲೇ ಕೆಳಗಿಳಿದು ಪರೇಶ ಹೋಗು, ಅವರನ್ನು ಕರೆದುಕೊಂಡು ಬಾ. ತಲೆ ಮೇಲೆ ಸಾಹೇಬರ ಟೊಪ್ಪಿಗೆ ಇದೆ ನೋಡು—ನಿನಗೊಂದು ಗಾಡಿ ತಂದು ಕೊಡುವೆ ಹೋಗು ಎಂದಳು."

ಆ ಹುಡುಗ ಗಾಡಿಯ ಆಶೆಯಿಂದಲೇ ಇಷ್ಟೆಲ್ಲ ದೂರ ಓಡಿ ಬಂದಿದ್ದಾನೆಂದು ತಿಳಿಯಿತು. ಅದಕ್ಕಾಗಿ ಆತ ಎಂದೂ ಬಿಡುವಂತಿಲ್ಲ. ತಾನೇ ಗಾಡಿಯ ಬೆಲೆ ಕೊಟ್ಟು ಕಳಿಸೋಣ ಎಂದು ಒಮ್ಮೆ ಯೋಚಿಸಿದ. ಆದರೆ ಇಂದು ಹೀಗೆ ಕರೆಯಿಸಿದ್ದರ ಉದ್ದೇಶವನ್ನು ಅರಿತುಕೊಳ್ಳುವ ಇಚ್ಛೆಯೂ ಆತನಿಗಿತ್ತು. ಹೋಗಬೇಕೋ ಬೇಡವೋ ಎಂಬುದನ್ನು ತೀರ್ಮಾನಿಸಲು ಆತನಿಗೆ ಇನ್ನೂ ತುಸು ಹೊತ್ತು ಹಿಡಿಯಿತು. ಯಾವ ನಿರ್ಣಯವೂ ಆಗಲಿಲ್ಲ. ಆದರೆ ಆತನ ಕಾಲು ಮಾತ್ರ ಮನೆಯ ಕಡೆಗೆ ಒಯ್ಯುತ್ತಿದ್ದಿತು. ಅಂತೂ ಮನೆ ಮುಟ್ಟಿದಾಗ ವಿಜಯೆ "ನೀವು ಒಳ್ಳೇ ಮನುಷ್ಯರು ತಿನ್ನುಣ್ಣದೇ ಈ ಬಿಸಿಲಲ್ಲಿ ನಡೆಯ ಹತ್ತಿರುವಿರಿ! ನಾನಂತೂ ಮಾತು ಮಾತಿಗೆ ಸಿಟ್ಟು ಮಾಡುವವಳು. ಆದರೆ ನೀವು........"

"ಇದೆಲ್ಲ ನಿಮಗಾರು ಹೇಳಿದರು? ನೀವು ಕೆಟ್ಟವರೆಂದು ನಾನಾದರೂ ಎಲ್ಲಿ ಅಂದಿರುವೆ?"

ವಿಜಯೆಯ ತುಟಿ ನಡುಗಹತ್ತಿತು. "ನೀವೇ ಅಲ್ಲವೆ? ನಲಿನಿಯ ಮುಂದೆ ಹಾಗೇಕೆ ಅಪಮಾನ ಮಾಡಿದಿರಿ? ಅಲ್ಲದೆ ನನ್ನ ಮೇಲಿನ ಸಿಟ್ಟಿನಿಂದಲೇ ಅಲ್ಲವೇ ನೀವೀಗ ತಿನ್ನುಣ್ಣದೆ ಹೋಗುತ್ತಿರುವುದು?" ಹೀಗೆ ಹೇಳುತ್ತ ಹೇಳುತ್ತ ಆಕೆಗೆ ಅಳು ಬಂದಿತು.

ನರೇಂದ್ರನು ಬುದ್ಧಿ ಶೂನ್ಯನಾದ. ಏನು ಮಾತಾಡಬೇಕೆಂದೇ ತೋಚದು. ಹೀಗೆ ಆಗಲು ಕಾರಣವೇನೆಂದೂ ತಿಳಿಯಲಿಲ್ಲ.

ನೌಕರನು ಬಂದು ಸ್ನಾನದ ಸಿದ್ಧತೆಯಾಗಿದೆಯೆಂದು ತಿಳಿಸಿ ಹೋದ.
" ಇನ್ನು ತಡಮಾಡಬೇಡಿ ಹೋಗಿರಿ " ಎಂದಳು.

ಸ್ನಾನ ತೀರಿಸಿ ಊಟಕ್ಕೆ ಕುಳಿತ. ವಿಜಯೆಯು ಬೀಸಣಿಗೆ ತಂದು ಗಾಳಿ ಬೀಸಲೆಳಸಿದಳು. ಆಕೆಯ ಸರ್ವಾಂಗವೂ ಲಜ್ಜೆಯಿಂದ ಆವರಿಸಿತು. ಗಾಳಿಬೀಸುತ್ತಿರುವುದನ್ನು ಕಂಡು ನರೇಂದ್ರನು ಸಂಕೋಚದಿಂದ " ನನಗೆ ಗಾಳಿಹಾಕುವುದು ಬೇಡ. ತಾವು ಬೀಸಣಿಕೆಯನ್ನಿಡಿರಿ " ಎಂದನು.

" ನಿಮಗೆ ಬೇಡವಾದರೂ ನನಗೆ ಬೇಕಾಗಿದೆ. ಹೆಂಗಸರೆಂದೂ ಸುಮ್ಮನೆ ಕೂಡ್ರಬಾರದೆಂದು ತಂದೆಯವರೆನ್ನುತ್ತಿದ್ದರು "

" ನಿಮ್ಮ ಊಟವಿನ್ನೂ ಆಗಿಲ್ಲವೆ? "

" ಇಲ್ಲ. ಗಂಡಸರ ಊಟವಾಗದ ಹೊರತು ಹೆಂಗಸರು ಊಟ ಮಾಡುವದಿಲ್ಲ "

" ಸಂತೋಷ. ಹಾಗಾದರೆ ನೀವು ಬ್ರಾಹ್ಮಸಮಾಜಕ್ಕೆ ಸೇರಿದರೂ ಆಚಾರ ವ್ಯವಹಾರವೆಲ್ಲ ನಮ್ಮಂತೆಯೇ ಇದೆ. "

" ಎಲ್ಲ ಬ್ರಾಹ್ಮರಲ್ಲಿಯೂ ಹೀಗೆ ಇಲ್ಲ. ನಮ್ಮ ತಂದೆಯೋರ್ವರೇ ಈ ರೀತಿ ನಡೆಯುತ್ತಿದ್ದರು. ಇದರಲ್ಲಿ ಆಶ್ಚರ್ಯಪಡುವ ಸಂಗತಿಯೇನೂ ಇಲ್ಲ. ನಾವೇನು ವಿಲಾಯತಿಯಿಂದ ಬಂದಿಲ್ಲ. ಆಚಾರ ವ್ಯವಹಾರವನ್ನೇನೂ ಕಾಬೂಲಿನಿಂದ ಖರೀದಿಸಿಲ್ಲ. ಹೀಗಿದ್ದರೆ ಒಂದುವೇಳೆ ಆಶ್ಚರ್ಯ ಪಡಬಹುದಿತ್ತು. "

"ಅಷ್ಟೊತ್ತಿಗೆ ಆಳು ಬಂದು ಅಮ್ಮಾ ನೌಕರ ಕಾಗದಪತ್ರ ತಂದಿದ್ದಾ "ನೆಂದು ತಿಳಿಸಿದ.

" ಈಗ ಸಮಯವಿಲ್ಲ. ನಾಳೆ ಬರಲು ಹೇಳು " ಎಂದು ಆಜ್ಞಾಪಿಸಿದಳು.

"ನೌಕರ ಹೋದಮೇಲೆ " ಈ ಮಾತು ನನಗೆ ತುಂಬಾ ಸಂತೋಷವನ್ನುಂಟು ಮಾಡಿತು " ಎಂದು ನರೇಂದ್ರನೆಂದ.

" ಯಾವ ಮಾತು? "

" ನೌಕರರು ಕರೆಯುವ ರೀತಿ, ನೀವು ಬ್ರಾಹ್ಮಣರು. ಮಾನ ಮರ್ಯಾದೆಗೆ ಕೊರತೆ ಇಲ್ಲ. ಹಣಕ್ಕೂ ನ್ಯೂನತೆಯಿಲ್ಲ. ನಾನು ಈಗ

ನಿಮ್ಮಂತಹ ಶ್ರೀಮಂತರಲ್ಲಿ ಮದ್ದು ಕೊಡಲು ಹೋಗಬೇಕಾಗುತ್ತಿದೆ. ಅವರಲ್ಲಿಯ ಆಳುಗಳೆಲ್ಲ "ಮೇಡಮ್" ಎಂದೇ ಸಂಬೋಧಿಸುತ್ತಾರೆ. ಆ ಶ್ರೀಮಂತರಿಗೆ ಮೇಡಮರೆಂದರೆ ಕೈವಲ್ಯ. ಅದಕ್ಕಾಗಿ ದುಡ್ಡು ಕೊಟ್ಟು ಆಳುಗಳಿಂದ ಈ ರೀತಿ ಕರೆಯಿಸಿಕೊಳ್ಳುತ್ತಾರೆ." ಎಂದು ಗಹಗಹಿಸಿ ನಕ್ಕ. ವಿಜಯೆಗೂ ನಗು ಬಂದಿತು. ಆತನೇ ಮತ್ತೆ ಮುಂದರಿಸಿದ. "ಆಳುಗಳಿಂದ "ಅವ್ವಾ" ಎನ್ನಿಸಿಕೊಳ್ಳುವುದಕ್ಕಿಂತ "ಮೆಡಮ್" ಎಂದು ಕರೆಯಿಸಿಕೊಳ್ಳುವುದು ಶ್ರೇಯಸ್ಕರವೆಂದು ಬಗೆದಿದ್ದಾರೆ. ಒಮ್ಮೆ ಒಬ್ಬ ಆಳು 'ಅವ್ವಾ' ಎಂದು ಕರೆದನಂತೆ. ಅದಕ್ಕಾಗಿ ಆತ ಒಂದುರೂಪಾಯಿ ದಂಡತೆತ್ತ. ಅವನ ಸುದೈವ ಎನ್ನಬೇಕು. ಇಲ್ಲವಾದರೆ ನೌಕರಿಯೂ ಹೋಗುತ್ತಿತ್ತು. ಇಂತಹ ಘಟನೆಗಳನ್ನು ನೀವೂ ಕೇಳಿರಬಹುದಲ್ಲವೆ?"

ವಿಜಯೆಯು ನಕ್ಕು ಗೋಣಲ್ಲಾಡಿಸಿದಳು.

"ಇವರ ಮಕ್ಕಳೆಲ್ಲ ಇವರಿಗೆ "ಮೇಡಮ್" ಅನ್ನುತ್ತಾರೋ "ಅವ್ವಾ" ಅನ್ನುತ್ತಾರೋ ನೋಡಬೇಕಾಗಿದೆ" ಎಂದು ಮಗದೊಮ್ಮೆ ಆ ಕೋಣೆಯನ್ನೆಲ್ಲ ನಗೆಯಿಂದ ತುಂಬಿದ.

"ಉಂಡುತಿಂದು ಬೇರೆಯವರ ಟೀಕೆ ಮಾಡುತ್ತ ಕೂಡ್ರಬಹುದು. ಹೀಗೆ ಮಾತಾಡುತ್ತ ಕೂತರೆ ನಾನು ಮಾತ್ರ ಉಪವಾಸ ಬೀಳಬೇಕಾದೀತು" ಎಂದು ನಕ್ಕಳು ವಿಜಯೆ.

ಆತ ಲಜ್ಜಿತನಾಗಿ ಗಡಬಿಡಿಯಿಂದ ೩-೪ ತುತ್ತು ತೆಗೆದು ಬಾಯಿಗೆ ಹಾಕಿದ. "ನಾನೂ ಸಹ ನಾಲ್ಕಾರು ವರ್ಷ ವಿಲಾಯತಿಯಲ್ಲಿದ್ದೆ. ಆದರೆ ಈ ದೇಶಿ ಸಾಹೇಬರು........"

"ಇನ್ನೂ ಅದೇ ಮಾತು, ಹೆರವರ ನಿಂದೆ"

"ಒಳ್ಳೇದು ಇನ್ನಿಲ್ಲ" ಎಂದವನೇ ತಿನ್ನಲು ಯತ್ನಿಸಿದಂತೆ ಮಾಡಿ "ಇನ್ನೇನೂ ಉಣ್ಣಲಾರೆ" ಎಂದ.

"ಅಯ್ಯೋ, ಏನೇನೂ ಉಂಡಿಲ್ಲವಲ್ಲ! ಇಲ್ಲ. ಎಂದೂ ಏಳಬೇಡಿ. ಹೆರವರ ಟೀಕೆ ಮಾಡುವದಾದರೂ ಅಡ್ಡಿಯಿಲ್ಲ. ಉಣ್ಣದೇ ಹೋಗಬೇಡಿ"

"ಇಷ್ಟೊಂದು ತಿಂದರೂ ಏನೂ ತಿನ್ನಲಿಲ್ಲವೆಂದು ಅನ್ನುತ್ತೀರಿ. ನಾನು ಕಲಕತ್ತೆಯಲ್ಲಿ ಉಣ್ಣುವರೀತಿ ನೋಡಿದರೆ ನಿಮಗೆ ಆಶ್ಚರ್ಯವಾಗುತ್ತಿತ್ತು.

ಈ ಕೆಲವು ತಿಂಗಳಲ್ಲಿಯೇ ನಾನೆಷ್ಟು ದುರ್ಬಲನಾಗಿರುವೆನೆಂಬುದ್
ತಿಳಿಯದೇ? ನಮ್ಮ ಹೊಟೇಲಿನ ಮಾಲಕನಿಗೆ ತಕ್ಕ ನೌಕರ ದೊರೆತಿದ್ದಾನೆ.
ಬೆಳಿಗ್ಗೇ ಅಡಿಗೆ ಮಾಡಿ ಎಲ್ಲಿ ಹೋಗುತ್ತಾನೋ ಯಾರು ಬಲ್ಲರು? ನನಗೆ
ಒಮ್ಮೊಮ್ಮೆ ಎರಡು ಘಂಟೆಗೆ ಬರಬೇಕಾಗುತ್ತಿದೆ. ನಾಲ್ಕು ಘಂಟೆಯಾಗು
ವುದೂ ಇದೆ. ಅದೇ ತಂಗಳನ್ನ ತಿಂದುಹೋಗಬೇಕಾಗುತ್ತಿದೆ. ಒಮ್ಮೆ
ಹಾಲು ಬೆಕ್ಕಿನ ಪಾಲಾಗಿರುತ್ತದೆ. ಇಲ್ಲವೆ ತೆರೆದಿಟ್ಟಲ್ಲಿ ಹಲ್ಲಿ ಬಿದ್ದಿರುತ್ತದೆ.
ತಿಂಗಳಲ್ಲಿ ಹದಿನೈದು ದಿನ ಉಪವಾಸವೇ ಗತಿ''

ವಿಜಯೆಗೆ ಸಿಟ್ಟುಬಂದಿತು. "ಇಂತಹ ನೌಕರನನ್ನೇಕೆ ಇಟ್ಟುಕೊಳ್ಳುತ್ತೀರಿ?
ಇಷ್ಟೊಂದು ಸಂಬಳ ಸಂಪಾದಿಸಿದರೂ ಈ ರೀತಿ ಕಷ್ಟಪಡುವದಾದರೆ
ಇಂತಹ ನೌಕರಿಯೇಕೆ?"

''ಒಂದು ರೀತಿಯಿಂದ ನಿಮ್ಮ ಮಾತು ನಿಜ. ಒಮ್ಮೆ ಪೆಟ್ಟಿಗೆಯಲ್ಲಿದ್ದ
೫-೬ ನೂರು ರೂಪಾಯಿ ಯಾರೋ ಕದ್ದೊಯ್ದರು. ಒಮ್ಮೆ ನೂರಿನ್ನೂರು
ರೂಪಾಯಿ ಎಲ್ಲಿ ಇಟ್ಟಿದ್ದೇನೆಂಬ ಎಚ್ಚರವೇ ಆಗಲಿಲ್ಲ. ಇಂತಹ ಮರವೆಯ
ಮನುಷ್ಯನಿಗೆ ನೌಕರಿಯೆಂದವರಾರು? ಇಂತಹರಿಗೆ ಕಷ್ಟ ಬರದೆ ಇನ್ನೇನು?
ಆದರೂ ಇಂತಹ ಕಷ್ಟಗಳೆಲ್ಲ ಪರಿಚಿತವಾದುವೇ. ಬಹಳ ಹಸಿವೆಯಾದಾಗ
ಊಟವೂ ಬೇಡವಾಗುತ್ತದೆ.— ನಿಜ. ನನಗೆ ನೌಕರೀ ಮಾಡುವುದೂ
ಸೇರದು. ನನ್ನ ಅವಶ್ಯಕತೆಗಳಾದರೂ ಹೆಚ್ಚೇನೂ ಇಲ್ಲ. ನಿಮ್ಮಂತಹ
ದೊಡ್ಡವರಾದರೂ ದಿನಾ ಎರಡು ಹೊತ್ತು ಊಟ ಹಾಕುತ್ತಿದ್ದರೆ— ನನ್ನ
ದಲ್ಲೇ ತನ್ಮಯನಾಗಿರಲು ಸಿಗುತ್ತಿದ್ದರೆ ನನಗೆ ಇನ್ನೇನು ಬೇಕಿರಲಿಲ್ಲ. ಆದರೆ
ಅಂತಹರೆಲ್ಲಿ ದೊರೆಯಬೇಕು? ನಿಮ್ಮ ತಂದೆಯವರಿದ್ದರೆ ನನಗೇನೂ ಕೊರತೆ
ಇರಲಿಲ್ಲ. ನನ್ನನ್ನು ರಕ್ಷಣೆ ಮಾಡುತ್ತಿದ್ದರು. ಇಂತಹ ನೌಕರಿಯಿಂದ
ನಿಜವಾಗಿಯೂ ತಪ್ಪಿಸುತ್ತಿದ್ದರು.''

''ನೀವು ಹೇಗೆ ಬಲ್ಲಿರಿ? ಅವರದೆಲ್ಲಿ ನಿಮಗೆ ಪರಿಚಯವಿದೆ?''

''ನಾನೂ ಅವರನ್ನು ನೋಡಿರಲಿಲ್ಲ. ಅವರೂ ನನ್ನನ್ನೂ ಕಂಡಿರಲಿಲ್ಲ.
ಆದರೆ ನನ್ನ ಮೇಲೆ ಅವರಿಗೆ ಬಲು ಪ್ರೀತಿ. ಅವರೇ ನನಗೆ ಹಣಕೊಟ್ಟು
ಇಂಗ್ಲೆಂಡಿಗೆ ಕಳುಹಿಸಿದವರು. ನಮ್ಮ ಸಾಲದ ವಿಷಯವಾಗಿ ಅವರು ನಿಮ್ಮ
ಹತ್ತಿರವಿನೊಂದೂ ಆಡಲಿಲ್ಲವೇ?''

"ಹೇಳಿರಬಹುದು. ಆದರೆ ನೀವು ಹೀಗೆ ಕೇಳುವುದರ ಉದ್ದೇಶವೇ ನೆಂಬುದನ್ನು ಅರಿತ ಹೊರತು ನಾನು ಹೇಳಲಾರೆ."

"ಹೋಗಲಿ ಬಿಡಿ. ಈಗ ಆ ಚರ್ಚೆಯ ಆವಶ್ಯಕತೆಯಿಲ್ಲ." ಈ ಮಾತು ಹೇಳಬೇಕಾದರೆ ಆತ ತುಸು ಯೋಚಿಸಬೇಕಾಯಿತು.

"ಇಲ್ಲ! ಇಲ್ಲ! ಹೇಳಿ. ನಾನು ಕೇಳಲು ಬಯಸುತ್ತೇನೆ."

"ಆ ಮಾತು ಈಗ ಮುಗಿದೆ ಹೋಗಿದೆ. ಹೇಳಿಯೂ ನಿಷ್ಪ್ರಯೋಜನ. ಅದನ್ನು ಕೇಳಿ ಈಗ ಮಾಡುವದೇನು?" ವಿಜಯೆ ಹಟ ಮಾಡಹತ್ತಿದಳು. "ಹಾಗೆಂದೂ ಆಗದು. ನಾನು ಕೇಳದ ಹೊರತು ಬಿಡುವಂತಿಲ್ಲ. ಹೇಳಿ, ಹೂಂ" ಈ ಒತ್ತಾಯನೋಡಿ ನರೇಂದ್ರನಿಗೆ ನಗು ಬಂದಿತು. "ಹೇಳು ವುದು ನಿರರ್ಥಕ. ಅಲ್ಲದೆ ನನಗೆ ನಾಚಿಕೆಯೆನಿಸುತ್ತಿದೆ. ನಿಮ್ಮನ್ನು ಕೌಶಲ ದಿಂದ ವಂಚಿಸಿದೆನೆಂದು........"

"ನನಗೆ ಯಾವ ರೀತಿ ಹೇಳಬೇಕೊ ತಿಳಿಯದು. ನಿಮ್ಮ ಕಾಲಿಗೆ ಬೀಳುತ್ತೇನೆ. ಹೇಳಿ."

"ಊಟವಾದ ಮೇಲೆ ಹೇಳಲೇ?"

"ಇಲ್ಲ. ಈಗಲೇ........"

"ಆಗಲಿ. ಹೇಳುತ್ತೇನೆ. ಆದರೆ ಮೊದಲೊಂದು ಮಾತು. ನಮ ಮನೆಯ ಬಗ್ಗೆ ಅವರೇನೂ ಹೇಳಿರಲಿಲ್ಲವೇ?"

ಆಕೆಗೆ ಕೇಳುವ ತಾಳ್ಮೆ ಇದ್ದಿರಲಿಲ್ಲ. ಆದರೆ ಆಕೆಯಿಂದ ಉತ್ತರ ಕೊಡಲಾಗಲಿಲ್ಲ.

ನರೇಂದ್ರನು ನಕ್ಕು ನುಡಿದ. "ಸಿಟ್ಟಾಗಬೇಡಿ ನಾನು ಹೇಳುವೆ' ನಾನು ವಿಲಾಯತಿಗೆ ಹೋಗುವುದೆಲ್ಲ ನಿಮ್ಮ ತಂದೆಯುವರ ಸಹಾಯದಿಂದಲೇ ಎಂದು ಕೇಳಿದ್ದೆ. ಈಗ ಮೂರು ದಿನದ ಹಿಂದೆ ದಯಾಲಬಾಬು ಅವರು "ಒಂದು ಕಾಗದದ ಕಟ್ಟನ್ನು ಕೊಟ್ಟರು."

ಹರಕು ಮುರುಕು ಸಾಮಾನು ತುಂಬಿದ ಕೋಣೆಯಲ್ಲಿ ಒಂದು ಕಪಾಟಿತ್ತು. ಅದರಲ್ಲಿ ಇದು ಸಿಕ್ಕಿತಂತೆ, ತಂದೆಯ ಸಾಮಾನಾದುದರಿಂದ ಅದನ್ನು ನನ್ನ ಕೈಗಿತ್ತರು. ಅದರಲ್ಲಿ ನಿಮ್ಮ ತಂದೆಯುವರು ಬರೆದ ಎರಡು ಪತ್ರ ಸಿಕ್ಕಿತು. ನಮ್ಮ ತಂದೆಯುವರು ಸಾಲದ ಭರದಿಂದ ಮುಪ್ಪಿನಕಾಲ

ದಲ್ಲಿ ಜುಗಾರು ಆಡುತ್ತಿದ್ದರೆಂದು ನೀವು ಕೇಳಿರಬಹುದು. ನಮ್ಮ ತಂದೆ ಯವರಿಗೆ ಉಪದೇಶ ಮಾಡುವ ರೀತಿಯಲ್ಲಿ ಆ ಪತ್ರವಿತ್ತು. ಆದರೆ ಕೊನೆಯಲ್ಲಿ ''ಮನೆಯ ಸಲುವಾಗಿ ನಿವೇನು ಕಾಳಜಿ ಮಾಡುವುದು ಬೇಡ. ನರೇಂದ್ರ ನನ್ನ ಮಗನೂ ಹೌದು, ವರದಕ್ಷಿಣೆಯಾಗಿ ಅದನ್ನು ಆತನಿಗೆ ಕೊಟ್ಟಿದ್ದೇನೆ'' ಎಂದು ಬರೆದಿತ್ತು.

''ಆ ಮೇಲೆ''

''ಇನ್ನೂ ಕೆಲವು ಸಂಗತಿ ಇದೆ. ಆದರೆ ಇದು ಬಹಳ ಹಿಂದಿನ ಪತ್ರ. ಅದರ ನಂತರ ಅವರ ಅಭಿಪ್ರಾಯ ಬದಲಾಗಿರಬಹುದು. ಅದಕ್ಕಾಗಿಯೇ ನಿಮ್ಮ ಹತ್ತರ ಹೇಳದಿರಬಹುದು."

ತಂದೆ ಅವಸಾನ ಕಾಲದಲ್ಲಿ ಹೇಳಿದ ಮಾತೆಲ್ಲ ಆಕೆಗೆ ನೆನಪಾಗಿ ನಿಟ್ಟುಸಿರಿಟ್ಟಳು. ಆಕೆ ತುಸು ತಡೆದು ನುಡಿದಳು. ''ಹಾಗಾದರೆ ನೀವು ದಾವೆ ಮಾಡಬಹುದಷ್ಟೇ?''

ಇಬ್ಬರೂ ನಕ್ಕರು. ''ದಾವೆ ಮಾಡುವೆ. ಅದರಲ್ಲಿ ನೀವೇ ಸಾಕ್ಷಿ ಹೇಳಬೇಕಾದೀತು. ನೀವು ದಿಟ ನುಡಿಯಬಹುದೆಂಬ ಭರವಸೆಯಿದೆ."

''ನಾನು ಹೇಳಿದರೂ ನಂಬುವವರಾರು?"

''ಇಲ್ಲವಾದರೆ ನನ್ನ ಕಡೆಗೆ ತೀರ್ಪಾಗುವುದು ಹೇಗೆ? ಆ ಮನೆಯು ನನ್ನ ಹಕ್ಕಿನದೆಂದು ಸಿದ್ಧಮಾಡಬೇಕಾದೀತು."

''ಬೇರೆ ಕೋರ್ಟಿಗೆ ಹೋಗುವದೇಕೆ? ತಂದೆಯ ಆಜ್ಞೆಯೇ ನನಗೆ ಶಿರಸಾವಮಾನ್ಯವಿದೆ. ಅದಕ್ಕಾಗಿ ಮನೆಯನ್ನೇ ನಿಮಗೆ ಒಪ್ಪಿಸುವೆ."

ಆಕೆಯ ಮಾತು ವ್ಯಂಗ್ಯವೆಂದು ಹೇಳಲು ಬರುವಂತಿದ್ದಿಲ್ಲ ಗಂಭೀರ ವಾಗಿಯೇ ಆಕೆ ನುಡಿದಿದ್ದಳು. ಹಾಗಾದರೆ ಅವರ ಅಪ್ಪಣೆಯನ್ನು ಕಣ್ಣಿಂದಲೂ ನೋಡದೆ, ನನ್ನ ಮಾತಿನ ಮೇಲಿಂದಲೇ ಮನೆಯನ್ನು ಒಪ್ಪಿಸಿ ಕೊಡುವಿರಾ?''

''ಇಲ್ಲ. ಆ ಪತ್ರವನ್ನು ನೋಡಲು ಬಯಸುತ್ತೇನೆ. ನೀವು ಹೇಳಿದಂತೆ ಅದರಲ್ಲಿ ಬರೆದುದಾದರೆ ಅವರ ಅಪ್ಪಣೆಯನ್ನು ಎಂದಿಗೂಮೀರಲಾರೆ."

''ಕೊನೆಯ ವರೆಗೂ ಅವರ ಅಭಿಪ್ರಾಯ ಒಂದೇ ರೀತಿ ಇದ್ದಿಲ್ಲ ಎಂದು ಹೇಳುವುದಕ್ಕಾದರೂ ಪ್ರಮಾಣವೇನಿದೆ?"

"ಆದರೆ ನಾನೇ ತೆಗೆದುಕೊಳ್ಳದಿದ್ದರೆ? ದಾವೆಯನ್ನು ಮಾಡದಿದ್ದರೆ?"

"ಅದು ನಿಮ್ಮ ಇಚ್ಛೆ. ನಿಮ್ಮ ಸಂಬಂಧಿಕರಾದರೂ ದಾವೆ ಮಾಡ ಬಹುದಲ್ಲ.

"ಒಂದು ವೇಳೆ ನಾನು ತೆಗೆದುಕೊಳ್ಳದಿದ್ದರೂ, ನೀವು ಕೊಟ್ಟೇ ತೀರುವಿರಾ?"

"ಅಹುದು. ತಂದೆಕೊಟ್ಟ ವಸ್ತುವನ್ನು ನಾನು ಒಳಗೆ ಹಾಕಿಕೊಳ್ಳಲು ಸಿದ್ಧಳಿಲ್ಲ.

ಆಕೆಯ ದೃಢನಿರ್ಧಾರವನ್ನು ಕೇಳಿ ಮನಸ್ಸಿನಲ್ಲಿಯೇ ವಿಸ್ಮಿತ ಹಾಗೂ ಮುಗ್ಧನಾದ.

"ಅದು ಸತ್ಕಾರ್ಯಕ್ಕೆ ವಿನಿಯೋಗಿಸಿದ್ದಾದುದರಿಂದ ತಂದೆಯ ಮಾತ್ರ ಮೀರಿದರೂ ಪಾಪ ತಟ್ಟುವಂತಿಲ್ಲ. ಅಲ್ಲದೆ ನಾನು ಅದನ್ನು ತೆಗೆದುಕೊಂಡಾ ದರೂ ಏನು ಮಾಡಲಿ? ಅದರಲ್ಲಿರಲು ನನ್ನವರೆಂಬುವವರು ಯಾರೂ ಇಲ್ಲ. ನಾನಿದ್ದವನೂ ಕೆಲಸಕ್ಕಾಗಿ ಅತ್ತ ಇತ್ತ ಅಡ್ಡಾಡಬೇಕಾಗುತ್ತಿದೆ. ಆದುದ ರಿಂದ ಈಗಾದ ವ್ಯವಸ್ಥೆ ಉತ್ತಮವಾಗಿದೆ. ಅಲ್ಲದೆ ವಿಲಾಸ ಬಾಬುವಿಗೆ ಒಪ್ಪಿಸುವ ಕಷ್ಟವೂ ತಪ್ಪಿದಂತೆ."

ಆಕೆಗೆ ಕೊನೆಯ ಮಾತಿನಿಂದ ಸಿಟ್ಟು ಬಂದಿತು. "ನನ್ನ ವಸ್ತುವಿಗಾಗಿ ಬೇರೊಬ್ಬರ ಪರವಾಗಿ ಕೇಳುತ್ತ ತಿರುಗುವಷ್ಟು ಪುರಸೊತ್ತಿಲ್ಲ. ನೀವು ಇನ್ನೊಂದು ದೃಷ್ಟಿಯಿಂದಲೂ ಈ ಪ್ರಶ್ನೆ ಬಗೆಹರಿಸಬಹುದು. ನಿಮಗೆ ಮನೆ ಬೇಡವಾದಲ್ಲಿ ಅವರಷ್ಟು ಬೆಲೆ ತೆಗೆದುಕೊಳ್ಳಿ. ಅದರಿಂದ ನಿಮಗೆ ನೌಕರಿ ಮಾಡುವ ಆವಶ್ಯಕತೆ ಬೀಳಲಿಕ್ಕಿಲ್ಲ. ಅಲ್ಲದೆ ನೀವು ಸ್ವಚ್ಛಂದವಾಗಿ ಇರಬಹುದು. ಇದಕ್ಕೆ ದಯವಿಟ್ಟು ಒಪ್ಪಿಕೊಳ್ಳಿ."

ಆಕೆಯ ವಿನಯ ಆತನಿಗೆ ತುಂಬ ತೊಂದರೆಗಿಟ್ಟುಕೊಂಡಿತು. ಈ ಮಾತು ಪರಿಹಾಸವಲ್ಲ; ಸತ್ಯವೆಂದು ಮನವರಿಕೆಯಾಯಿತು. ತನ್ನನ್ನು ಗೃಹ ಹೀನನನ್ನಾಗಿ ಮಾಡಿ ಈಕೆ ಸುಖಪಡಲಿಲ್ಲವೆಂದು ಅನಿಸಿತು. ಆದರೆ ಒಮ್ಮೆಲೇ ಒಪ್ಪುವುದು ಹೇಗೆ? ವಿಲಾಸು ಒಪುವನೇ? ಅದಕ್ಕಾಗಿ ಈಕೆ ತೊಂದರೆಯಲ್ಲಿ ಬೀಳಬೇಕಾದೀತಲ್ಲದೇ?" ಎಂದು ಯೋಚಿಸಿ "ನಿಮ್ಮ ಮನ ದೊಲವು ತಿಳಿಯಿತು. ಹೇಗಾದರೂ ಈ ಬಡವನಿಗಷ್ಟು ಸಹಾಯ ಮಾಡೋ ಣವೆಂದು ನಿಮಗನಿಸಿರಬೇಕಲ್ಲವೇ?"

ಇಂಥ ಮಾತನ್ನು ಮೊದಲೊಮ್ಮೆ ಕೇಳಿದ್ದಳು. ಅದಕ್ಕಾಗಿ ಆಕೆಗೆ ಅತೀವ ವೇದನೆಯಾಯಿತು. ''ಇಂತಹ ಮಾತಿನಿಂದ ನನಗೆಷ್ಟು ವೇದನೆಯಾಗುತ್ತಿದೆಯೆಂದು ಬಲ್ಲಿರಾ?''

''ಹಾಗಾದರೆ ನಿಮ್ಮ ವಿಚಾರ ವೇನೆಂಬುದನ್ನಾದರೂ ಹೇಳಿಬಿಡಿ.''

''ನಾನು ಒಂದೇ ಮಾತಿನವಳು. ನಿಮಗೇತಕೋ ಸಂದೇಹ. ನೀವು ಬಡವರಿದ್ದರೇನು.? ಶ್ರೀಮಂತರಾದರೇನು? ಅದರ ಗೋಡವೆ ನನಗಿಲ್ಲ. ತಂದೆಯ ಆಜ್ಞೆಯನ್ನು ಪಾಲಿಸುವದೇ ನನ್ನ ಕರ್ತವ್ಯ.''

''ಆದರೆ ಇಷ್ಟರಿಂದಲೇ ಆಗಲಿಲ್ಲ. ಉತ್ಸಾಹದ ಭರದಲ್ಲಿ ಮಾತು ಕೊಡಬೇಡಿರಿ. ತಂದೆಯ ಮಾತನ್ನು ಪಾಲಿಸುವದಾದರೆ ಮನೆಯೊಂದೇ ಅಲ್ಲ. ಇನ್ನೂ ಕೊಡತಕ್ಕದ್ದಿದೆ.''

''ಒಳ್ಳೇದು ಹಾಗಾದರೆ. ನಿಮ್ಮೆಲ್ಲ ವಸ್ತುಗಳನ್ನೂ ತೆಗೆದುಕೊಳ್ಳಿರಿ.''

ನರೇಂದ್ರನಿಗೆ ನಗು ಬಂದಿತು. ''ಗಟ್ಟಿಯಾಗಿ ದಾವೆಮಾಡಲು ಹೇಳುತ್ತಿರುವಿರಿ. ಆದರೆ ಈ ಮನೆ, ಸ್ವಲ್ಪ ಭೂಮಿ ಇಷ್ಟೇ ಅಲ್ಲ. ಒಂದು ವಸ್ತು ಅದಕ್ಕೂ ಮಹತ್ವವಾದದ್ದಿದೆ.''

ವಿಜಯೆಗೆ ಉತ್ಸುಕತೆಯಾಯಿತು. ''ತಂದೆಯವರು ಇನ್ನೇನನ್ನು ಕೊಟ್ಟಿದ್ದಾರೆ?''

''ತಂದೆಯವರ ಆ ದೇಶಪಾಲಿಸುವ ಹಠ ನಿಮ್ಮದೇ? ಹಾಗಾದರೆ ಈ ಮನೆ, ಈ ಕೋಣೆ, ಇಲ್ಲಿಯ ಕನ್ನಡಿ, ಕಪಾಟು, ಪಲ್ಲಂಗ, ಹಾಸಿಗೆ, ದಾಸದಾಸಿಯರು ಇಷ್ಟೇಕೆ ಅವುಗಳ ಒಡತಿ ಇವರೆಲ್ಲರನ್ನು ನನಗೆ ಅರ್ಪಿಸಿದ್ದಾರೆ! ತಂದೆಯ ಅಪ್ಪಣೆಯಂತೆ—ತಂದೆಯ ಅಪ್ಪಣೆ! ಎಲ್ಲವನ್ನೂ ಪಾಲಿಸುವಿರಾ?''

ವಿಜಯೆಗೆ ಆಮೂಲಾಗ್ರವಾಗಿ ರೋಮಾಂಚನವಾಯಿತು. ಆಕೆ ಪ್ರತಿಮೆಯಂತೆ ಸುಮ್ಮನೆ ಕುಳಿತಳು. ನರೇಂದ್ರ ವಿಜಯದ ನಗೆಯಿಂದ ''ಏನು? ಕೊಡುವಿರಾ? ಕೊಡುವ ಹಾಗೇ ಕಾಣುತ್ತಿದೆ. ಆದರೆ ಒಮ್ಮೆ ವಿಲಾಸನೊಡನೆ ವಿಚಾರಿಸಿರಿ'' ಎಂದು ಹಾ ಹಾ ಎಂದು ನಗಹತ್ತಿದನು.

ಆಕೆ ತಲೆಯೆತ್ತಿದೊಡನೆಯೇ ನರೇಂದ್ರನ ನಗೆಗೆ ತಡೆ ಬಿದ್ದಿತು. ಆಕೆಯ ಮೋರೆಯ ಮೇಲೆ ರಕ್ತದ ಕಳೆಯೆ ಇರಲಿಲ್ಲ. ಆಕೆಯನ್ನು ಕಂಡು ಉದ್ವಿಗ್ನನಾಗಿ ನುಡಿದ. ''ಅಯ್ಯೋ ಬೆಪ್ಪೇ ನಾನು ದಾವೆ ಮಾಡುತ್ತೇನೆಂದು ಭಾವಿಸಿದಿರಾ? ಹೀಗೆಲ್ಲ ಮಾಡಹತ್ತಿದರೆ ''ಹುಚ'' ಎಂದು ಭಾವಿಸಿ ಬಿಟ್ಟಾರು!''

"ನೋಡುವಾ, ತಂದೆಯವರ ಪತ್ರವೆಲ್ಲಿದೆ?"

"ಓಹೋ, ನಾನೇನು ಕಿಸೆಯಲ್ಲಿಟ್ಟುಕೊಂಡೇ ತಿರುಗುತ್ತೇನೆಂದು ನಿಮ್ಮ ಕಲ್ಪನೆಯೇ! ಇರಲಿ. ಅದನ್ನು ನೋಡುವುದರಿಂದ ನಿಮಗಾಗುವ ಲಾಭ ವಾದರೂ ಏನು?"

"ಲಾಭ ಆಗಲಿ, ಆಗದಿರಲಿ, ಈ ಹೊತ್ತು ಆಳಿನ ಸಂಗಡ ಆ ಎರಡು ಪತ್ರ ಮರೆಯದೇ ಕಳುಹಿಸಿರಿ. ಅವನು ನಿಮ್ಮ ಸಂಗಡ ಕಲಕತ್ತೆಗೆ ಬರುವ."

"ಈಗಲೇ ಬರುವನೇನು?"

"ಅಹುದು."

೨೩

ರಾತ್ರಿ ನಿದ್ದೆಯಿರದ್ದರಿಂದ ಏಳಲು ವಿಜಯೆಗೆ ತಡವಾಯಿತು. ಎದ್ದಾಗ ಕಾರಕೂನನು ಲೆಖ್ಖ ಪತ್ರಗಳನ್ನೆಲ್ಲ ಮೇಜಿನ ಮೇಲಿಟ್ಟುಕೊಂಡು ನಿಂತಿದ್ದ. "ಅಮ್ಮಾ, ಇವಕ್ಕೆಲ್ಲ ಇಂದ್ದೆಯೇ ಸಹಿಯಾಗಬೇಕು."

"ಇನ್ನೆರಡು ತಾಸು ಬಿಟ್ಟು ಬಾ" ಎಂದು ಅಪ್ಪಣೆ ಮಾಡಿ ಲೆಖ್ಖದ ಪಟ್ಟಿಯನ್ನು ತೆಗೆದುಕೊಂಡು ಬಂದು ಮಂಚದ ಮೇಲೆ ಕುಳಿತುಕೊಂಡಳು. ಅದರಲ್ಲಿ ಆಕೆಗೆ ಲಕ್ಷ್ಯವೇ ಇರಲಿಲ್ಲ. ಆಕೆಯ ಉದ್ಭ್ರಾಂತ ದೃಷ್ಟಿಯು ಲೆಖ್ಖದ ಅಂಕೆಗಳನ್ನು ಬಿಟ್ಟು ಅತ್ತಿತ್ತ ಹೊರಳುತ್ತಿತ್ತು. ಒಮ್ಮಿಂದೊ ಮ್ಮೆಯೇ ರಾಸಬಿಹಾರಿಯು ಒಂದು ಮರದಡಿಯಲ್ಲಿ ನಿಂತು ಪರೇಶನೊಡನೆ ಚೌಕಶಿ ಮಾಡುತ್ತಿರುವುದು ಕಾಣಿಸಿತು. ಇಬ್ಬರಲ್ಲಿ ಯಾರ ಮಾತೂ ಕಿವಿಗೆ ಬೀಳದಿದ್ದರೂ, ಆ ಮುದುಕನ ಅಂತರ್ಯವೇನೆಂಬುದನ್ನು ಅವಳು ಅರಿತು ಕೊಂಡಳು.

ಕೆಲಹೊತ್ತಿನ ನಂತರ ಆತ ಕಚೇರಿಯ ಕಡೆಗೆ ಹೊರಟ. ಪರೇಶ ಮನೆಯ ಕಡೆಗೆ ಹೋಗುತ್ತಿದ್ದ. ವಿಜಯೆ ಅವನನ್ನು ಕರೆದು "ಏನು ಕೇಳು ತ್ತಿದ್ದ" ಎಂದು ಕೇಳಿದಳು.

"ಅಮ್ಮಾ ನೋಡು, ನೌಕರನಿಂದ ದುಡ್ಡು ತೆಗೆದುಕೊಂಡು ನಾನು ಗಾಡಿ ತೆಗೆದುಕೊಳ್ಳಲು ಹೋಗಿದ್ದೆನಷ್ಟೇ! ನರೇಂದ್ರ ಬಾಬು ಬಂದಾಗ ನಾನೆಲ್ಲಿ ಇಲ್ಲಿದ್ದೆ?"

"ನೀನು ಇರಲಿಲ್ಲ."

"ಆ ದೊಡ್ಡ ರಾಯರು ನರೇಂದ್ರ ಬಂದು ಇಲ್ಲಿ ಏನೇನು ಮಾತಾಡಿದ. ಹೇಳು. ಇಲ್ಲವಾದರೆ ನಿನಗೆ ಪೋಲೀಸರ ಕೈಯ್ಯಲ್ಲಿ ಕೊಡುತ್ತೇನೆಂದು ಹೆದರಿಸುತ್ತಾರೆ. ಅಮ್ಮಾ, ನಾನು ಹೀಗೆ ಹೇಳಿದೆನೆಂದು ದೊಡ್ಡರಾಯರಿಗೆ ಮಾತ್ರ ಹೇಳಬೇಡ. ಅವರು ಮೈ ಚರ್ಮ ಸುಲಿದೇ ಬಿಟ್ಟಾರು."

"ಇಲ್ಲ" ಎಂದವಳೇ ಲೆಖ್ಖ ಪತ್ರ ತೆಗೆದುಕೊಂಡು ಕುಳಿತಳು. ಆದರೆ ಎಲ್ಲ ಸಾರಿಸಿದಂತೆ ಕಂಡು ಬರುತ್ತಿತ್ತು. ನಿದ್ದೆಯಿಲ್ಲದೆ ಕೆಂಪಾದ ಕಣ್ಣು ಸಿಟ್ಟಿನಿಂದ ಇನ್ನಿಷ್ಟು ಭಯಂಕರವಾಗಿ ಕಾಣಹತ್ತಿತು. ಕೆಲಹೊತ್ತಿನಲ್ಲಿಯೇ ರಾಸಬಿಹಾರಿ ಹೊರಗೆ ಬಂದು ತುಸು ಕೆಮ್ಮಿದಂತೆ ಮಾಡಿ ಖುರ್ಚಿಯೊಂದನ್ನು ಎಳೆದುಕೊಂಡು ಕುಳಿತುಕೊಂಡ.

ವಿಜಯೆ ಖಾತೆ ಪುಸ್ತಕದಿಂದ ತಲೆಯೆತ್ತಿ "ಬನ್ನಿ, ಇಂದೇನು ಬೆಳಿಗ್ಗೇ ಬಂದುಬಿಟ್ಟಿರಿ?"

ಈ ಪ್ರಶ್ನೆಗೆ ಆತ ನೇರವಾಗಿ ಉತ್ತರ ಕೊಡಲಿಲ್ಲ. "ಮಗೂ, ಕಣ್ಣೆಲ್ಲ ಕೆಂಪಗಾಗಿದೆ. ರಾತ್ರಿ ಥಂಡಿ ಹತ್ತಿತೇ?"

"ಇಲ್ಲ."

ರಾಸಬಿಹಾರಿ ಅತ್ತ ಗಮನಿಸದೆ ತನಗಾದ ವ್ಯಥೆಯನ್ನು ಪ್ರಕಟಿಸಿದ.

"ಮಗೂ, ಏನಾಯಿತು ಹೇಳು. ರಾತ್ರಿ ನಿದ್ದೆ ಹತ್ತಿಲ್ಲವೇ? ಅಥವಾ ಇನ್ನೇನು........?"

"ಇಲ್ಲ. ನನಗೇನೂ ಆಗಿಲ್ಲ."

"ಆದರೆ ಹೀಗೆ ಕಣ್ಣು ಕೆಂಪಗಾಗಲು ಏನಾದರೂ ಕಾರಣವಿದ್ದೇ ತೀರಬೇಕು........"

ವಿಜಯೆ ವಿಶೇಷ ಮಾತಾಡದೆ ಕೆಲಸದಲ್ಲಿ ತೊಡಗಿದ್ದರಿಂದ ರಾಸ ಬಿಹಾರಿ ಅಲ್ಲಿಗೇ ತಡೆದ. "ಕಡೆಗೆ ಬಿಸಿಲಾಗುತ್ತದೆಂದು ಈಗಲೇ ಬಂದೆ ಮಗಳೇ. ಎಲ್ಲ ಲೆಖ್ಖಪತ್ರಗಳನ್ನೂ ನೋಡುವುದಿದೆ. ನೆರೆಯುವರೊಬ್ಬರು ದಾವೆ ಮಾಡಲಿದ್ದಾರೆ."

ಜಮೀನುದಾರಿಗೆ ಸಂಬಂಧಿಸಿದ ಅತ್ಯಂತ ಮಹತ್ವದ ಕಾಗದಪತ್ರಗಳನ್ನೆಲ್ಲ ವನವೀರ ತನ್ನ ಹತ್ತರವೇ ಇಟ್ಟುಕೊಳ್ಳುತ್ತಿದ್ದ. ಅವು ದಿನಾಲು ಉಪಯೋಗಕ್ಕೆ ಬೀಳುತ್ತಿದ್ದಿಲ್ಲ. ಅಲ್ಲದೆ ಕಳೆದರೆ ತಿರುಗಿ ಸಿಗುವಂತಿರಲಿಲ್ಲ. ಅದಕ್ಕಾಗಿ ಅವನ್ನೆಲ್ಲ ಜತನದಿಂದ ಕಾದುಕೊಂಡಿದ್ದ. ಕಲಕತ್ತೆಯಿಂದ ಬರುವಾಗ ವಿಜಯೆ ಅವನ್ನೆಲ್ಲ ತಂದಿದ್ದಳು. ಹಾಗೂ ತಾನು ಮಲಗುವ ಕೋಣೆಯಲ್ಲಿಯ ಕಪಾಟೊಂದರಲ್ಲಿ ಭದ್ರವಾಗಿಟ್ಟಿದ್ದಳು.

''ದಾವೆ ಮಾಡುತ್ತಾರೆಂದು ನಿಮಗೆ ಯಾರು ಹೇಳಿದರು?"

''ಹೇಳಿದವರು ಯಾರೂ ಇಲ್ಲ. ಗಾಳಿ ಸುದ್ದಿ. ನನಗೆಲ್ಲ ತಿಳಿಯುತ್ತದೆ. ಇಲ್ಲವಾದರೆ ಇಷ್ಟೆಲ್ಲ ವ್ಯವಹಾರ ಸಾಗಿಸುವುದು ಶಕ್ಯವಿತ್ತೇ?''

"ಅವರು ಸುಮಾರು ಎಷ್ಟು ಜಾಗೆಯ ಸಲುವಾಗಿ ದಾವೆ ಮಾಡುತ್ತಾರೆ ?"

''ಕಡಿಮೆಯೆಂದರೂ ಎರಡು ಬಿಘೆ ಹೊಲವಾದೀತು."

''ಹಾಗಾದರೆ ಅವರೇ ತೆಗೆದುಕೊಳ್ಳಲಿ. ಇಂತಹ ಸಣ್ಣ ಭೂಮಿಗಾಗಿ ವ್ಯಾಜ್ಯ-ವ್ಯವಹಾರವೇಕೆ ?"

''ಮಗಳೇ, ಇದೆಂತಹ ಮಾತಾಡುತ್ತೀಯೆ ? ನಿನ್ನಂತಹ ಕಲಿತವಳು ಹೀಗೆ ಹೇಳಬಹುದೆಂದು ಭಾವಿಸಿರಲಿಲ್ಲ. ಕಾಸು ಬಿಟ್ಟವನು ದೇಶಬಿಟ್ಟನು ಎಂಬುದು ಸುಳ್ಳಲ್ಲ."

ಹೀಗೆ ಚುಚ್ಚುವ ಮಾತಾಡಿದರೂ ವಿಜಯೆ ವಿಚಲಿತಳಾಗಲಿಲ್ಲ. ''ನಮಗೇನು ಈಗ ದೇಶ ಬಿಡಬೇಕಾಗಿಲ್ಲ. ಉಗುರಿನಿಂದ ಹೋಗುವುದಕ್ಕೆಲ್ಲ ಕೊಡಲಿ ಏಕೆ?"

''ಮಗಳೇ, ಅದೆಂದೂ ಆಗದು. ನಿಮ್ಮ ತಂದೆಯು ನನ್ನ ಮೇಲೆಯೆ ಎಲ್ಲ ಜವಾಬುದಾರಿ ಹೊರಿಸಿ ಹೋಗಿರುವಾಗ ಎರಡು ಬಿಘೆ ಏಕೆ? ಎರಡು ಅಂಗುಲ ಭೂಮಿ ಬೇರೆಯವರ ವಶವಾಗಗೊಡಲಿಕ್ಕಿಲ್ಲ. ಅದಕ್ಕಾಗಿ ಹಿಂದಿನ ದಸ್ತಾವೇಜನ್ನೆಲ್ಲ ಒಮ್ಮೆ ನೋಡಬೇಕಾಗಿದೆ. ತುಸು ಕಷ್ಟವಾದರೂ ಅಡ್ಡಿಯಿಲ್ಲ. ಮೇಲಿನ ಕಾಗದ ಪತ್ರವನ್ನೆಲ್ಲ ಹುಡುಕಿ ತಾ."

ಆಕೆ ಏಳುವ ಲಕ್ಷಣ ತೋರಲಿಲ್ಲ. ''ಇದೊಂದೇ ಕಾರಣವೋ? ಅಥವಾ ಇನ್ನೂ ಕಾರಣವಿದೆಯೋ ?''

"ಹೌದು."

"ಎಂತಹದು?"

ಮನಸ್ಸಿನಲ್ಲಿ ಖತಿಗೊಂಡನಾದರೂ ಮಾತಿನಲ್ಲಿ ತೋರಗೊಡಲಿಲ್ಲ. "ಒಂದಲ್ಲ, ಹಲವಾರು ಕಾರಣಗಳಿವೆ. ಅವನ್ನೆಲ್ಲ ಒಂದೇ ಉಸುರಿಗೆ ಹೇಗೆ ಹೇಳಲಿ?"

ಇದೇ ಹೊತ್ತಿಗೆ ಖಾತೆ-ಕೀರ್ದಿಯ ಸಲುವಾಗಿ ಕಾರಕೂನನು ಒಳಗೆ ಬಂದ. "ಇನ್ನೂ ಆಗಲಿಲ್ಲ. ಕಡೆಗೆ ಬಂದು ತೆಗೆದುಕೊಂಡು ಹೋಗು."

"ಅಪ್ಪಣೆ" ಎಂದು ಹೊರಡುವದರಲ್ಲಿದ್ದ. ಅಷ್ಟರಲ್ಲಿ ವಿಜಯೆ "ಹೊಸ ಆಳು ಕೆಲಸಕ್ಕೆ ಬಂದು ಎಷ್ಟು ದಿನವಾಯಿತೆಂದು ಬಲ್ಲೆಯಾ?" ಎಂದು ಕೇಳಿದಳು.

"ಸುಮಾರು ಮೂರು ತಿಂಗಳಾಗಿರಬಹುದು."

"ಆಗಲಿ. ಈ ತಿಂಗಳಿಗೆ ಇನ್ನೂ ಇಪ್ಪತ್ತು ದಿನ ಬಾಕಿ ಇದೆ. ಈ ತಿಂಗಳ ಪೂರ್ಣ ಪಗಾರು ಕೊಟ್ಟು ಅವನನ್ನು ಮೋಕಳೀಕ ಮಾಡು."

ಗುಮಾಸ್ತ ಚಕಿತನಾದ. ಆತನ ತಪ್ಪೇನೆಂದು ಕೇಳಬೇಕೆಂದು ಮಾಡಿದ್ದ. ಆದರೆ ಸಾಹಸವಾಗಲಿಲ್ಲ.

ವಿಜಯೆಗೆ ಅರ್ಥವಾಯಿತು. "ಅವನ ತಪ್ಪೇನಿಲ್ಲ. ಆದರೆ ನನಗೇಕೋ ಆತನು ಸೇರುವದಿಲ್ಲ. ಆದರೆ ಈ ತಿಂಗಳ ಪೂರ್ಣ ಪಗಾರ ಕೊಡಿರಿ."

ರಾಸಬಿಹಾರಿಗೆ ಸಿಟ್ಟು ಬಂದಿತು. ಆದರೂ ತೋರಗೊಡದೆ ನಗುತ್ತ "ಸುಮ್ಮನೆ ನಿರಪರಾಧಿಗಳ ಹೊಟ್ಟೆ ಹೊಡೆಯುವುದು ಯೋಗ್ಯವೇ?"

ವಿಜಯೆ ಉತ್ತರ ಕೊಡದೆ ಕೆಲಸದಲ್ಲಿ ಮಗ್ನಳಾದಳು. ಸುಮಾರು ೫ ನಿಮಿಷದ ನಂತರ "ಮಗೂ, ಸ್ವಲ್ಪ ಕಷ್ಟವಾದರೂ ಅಡ್ಡಿಯಿಲ್ಲ. ಮೇಲೆ ಹೋಗಿ ಕಾಗದ ಪತ್ರ ತೆಗೆದುಕೊಂಡು ಬಾ. ಒಮ್ಮೆ ಅವುಗಳನ್ನೆಲ್ಲ ಆಮೂಲಾಗ್ರವಾಗಿ ನೋಡಬೇಕಾಗಿದೆ."

"ಯಾಕೆ"

ರಾಸಬಿಹಾರಿ ಗಂಭೀರನಾದ. "ವಿಶೇಷ ಕಾರಣವಿದೆಯೆಂದು ಹೇಳಿದೆನಲ್ಲವೇ? ಮೇಲಿಂದ ಮೇಲೆ ಅದನ್ನೇ ಹೇಳಲು ನನಗೆ ಪುರಸೊತ್ತಿಲ್ಲ."

" ನೀವು ಹೇಳುವುದು ನಿಜ. ಆದರೆ ಸರಿಯಾದ ಕಾರಣವೊಂದನ್ನೂ ಹೇಳಲಿಲ್ಲವಲ್ಲ !"

" ಹೇಳದ ಹೊರತು ಏಳುವಂತಿಲ್ಲವೇನು? ನನ್ನಲ್ಲಿ ಅವಿಶ್ವಾಸವೇ?"

ವಿಜಯೆ ಉತ್ತರ ಕೊಡಲಿಲ್ಲ. ಇದರಿಂದಂತೂ ರಾಸಬಿಹಾರಿಗೆ ತುಂಬ ಸಿಟ್ಟು ಬಂದಿತು. ಆತ ಕೈಯಲ್ಲಿರುವ ಕೋಲಿನಿಂದ ಮೇಜನ್ನು ಬಡೆದು " ಹೀಗೇಕೆ ನನ್ನ ಅಪಮಾನವನ್ನು ಮಾಡುತ್ತಿರುವಿ ? ನನ್ನಲ್ಲೇಕೆ ಅವಿಶ್ವಾಸ ಪಡುವಿ? ಹೇಳು. ಅದರ ಕಾರಣವನ್ನಾದರೂ ಹೇಳು."

" ನೀವು ನನ್ನಲ್ಲಿ ಅವಿಶ್ವಾಸ ವ್ಯಕ್ತಪಡಿಸಿದ್ದೀರಿ. ನನ್ನ ಹಣದಿಂದಲೇ ನನ್ನ ಮೇಲೆ ಗುಪ್ತಚಾರರನ್ನು ನಿಯಮಿಸಿದ್ದೀರಿ. ನನ್ನ ದಸ್ತೈವಜನ್ನು ಕೇಳುವುದರಲ್ಲಿ ಯಾವ ಉದ್ದೇಶವಿದೆಯೆಂದು ನಾನು ಭಾವಿಸಲಿ? ಹೀಗೆ ಮಾಡಿದರೆ ನಿಮ್ಮ ಅಪಮಾನ ಮಾಡಿದಂತಾಯಿತೇ?"

ರಾಸಬಿಹಾರಿಗೆ ಮಾತೇ ಹೊರಡಲಿಲ್ಲ. ಹುಟ್ಟಿ ಮೂರು ಸೋಮವಾರ ವಾಗದ ಹುಡುಗಿಯಿಂದ ಪರಾಭವವನ್ನು ಹೊಂದಬೇಕಾದೀತೆಂದು ಆತ ಎಣಿಸಿರಲಿಲ್ಲ. ಕೊನೆಯ ಅಸ್ತ್ರ—ಶೇಷಂ ಕೋಪೇನ ಪೂರಯೇತ್— ಎತ್ತಿದ. ವನವೀರನ ಮರ್ಯಾದೆಯನ್ನುಳಿಸಬೇಕೆಂತಲೇ ನಾನು ಇಷ್ಟೆಲ್ಲ ಮಾಡಿದ್ದು. ನಿನ್ನ ನಡತೆಯ ಬಗ್ಗೆ ನಾನು ಕಣ್ಣಿಡಬೇಕಾಯಿತು. ಅಪರಿಚಿತ ದುರ್ಭಾಗ್ಯನನ್ನು ಕರೆಸಿ ನಿನ್ನೆ ಪೂರಾ ದಿನ ಮಾತಾಡುತ್ತಿದ್ದುದರ ಅರ್ಥ ನನಗಾಗುವದಿಲ್ಲವೆಂದು ಭಾವಿಸಿರುವೆಯಾ? ಇಷ್ಟೇ ಅಲ್ಲ. ಹಿಂದೊಮ್ಮೆ ರಾತ್ರಿಯೆಲ್ಲ ಆತನೊಡನೆ ವಿನೋದವಿಲಾಸಗಳಲ್ಲಿ ಕಳೆದಿರಲಿಲ್ಲವೇ ? ಆತ ರಾತ್ರಿ ಕಲಕತ್ತೆಗೂ ಹೋಗದೆ ನೆವ ಹೇಳಿ ಇಲ್ಲಿಯೇ ಉಳಿದಿದ್ದನಲ್ಲವೇ? ಇದರಿಂದ ನಿನಗೇನು ಹೆಚ್ಚು ಕಡಿಮೆ ಇಲ್ಲ. ಆದರೆ ನಮಗೆ ಮಾತ್ರ ಎಲ್ಲಿಯೂ ಮೋರೆಯೆತ್ತದಂತೆ ಮಾಡಿರುವಿ."

ರಾಸಬಿಹಾರಿ ಈ ರೀತಿ ಕ್ಷುಲ್ಲಕರಂತೆ ಮಾತಾಡುವನೆಂದು ಆಕೆ ಬಗೆದಿರಲಿಲ್ಲ. ಆಕೆಯಿಂದ ಮಾರುತ್ತರಗೊಡಲಾಗಲಿಲ್ಲ.

ಇತ್ತ ರಾಸಬಿಹಾರಿ ಆಕೆಗಾದ ವೇದನೆಯನ್ನು ತಿಳಿಯಲು ಕುತೂಹಲಿಯಾಗಿದ್ದ. " ಅಂದ ಬಳಿಕ ಇಂತಹ ಹೊಲಸು ನಡತೆಯನ್ನು ತಿದ್ದುವುದು ನನ್ನ ಕರ್ತವ್ಯವಲ್ಲವೇ? ಸುಮ್ಮನಿರಬೇಡ. ಹೇಳು. ಇವೆಲ್ಲ ಸಣ್ಣ ಸಂಗತಿಯಲ್ಲ. ಉತ್ತರ ಕೊಡಲೇ ಬೇಕಾದೀತು."

ಇಷ್ಟು ಹೊತ್ತಿನ ಮೇಲೆ ಆಕೆ ತಲೆಯೆತ್ತಿದಳು. ಆಕೆಯ ತುಟಿ ನಡುಗುತ್ತಿದ್ದಿತು.

"ಬೇಕಾದಂತಹ ಪ್ರಸಂಗವಿರಲೊಲ್ಲದೇಕೆ, ಸುಳ್ಳು ಸಟೆಗಳಿಗೆಲ್ಲ ಉತ್ತರ ಕೊಡಲು ಸಿದ್ಧಳಿಲ್ಲ."

"ಇದನ್ನು ಸುಳ್ಳೆಂದು ಹಾರಿಸುವ ಯತ್ನ ಮಾಡುತ್ತೀಯಾ?"

"ಹಾರಿಸುವ ಪ್ರಯತ್ನ ನನ್ನದಲ್ಲ. ಇದು ಅಸತ್ಯ ಎಂದಿಷ್ಟೇ ನಾನು ಹೇಳುವುದು. ಇಷ್ಟೇ ಅಲ್ಲ; ಇದು ಸಂಪೂರ್ಣ ಸುಳ್ಳೆಂದು ನಿಮ್ಮ ಆತ್ಮಕ್ಕೇ ಗೊತ್ತಿದೆ."

ಈ ರೀತಿಯ ಉತ್ತರ ಬಂದೀತೆಂದು ಭಾವಿಸಿರಲಿಲ್ಲ. "ಇದು ಸಂಪೂರ್ಣ ಸುಳ್ಳೆಂದು ನನಗೇ ಹೆಚ್ಚು ಗೊತ್ತಿರುವುದೇ?" ಎಂದು ಆತನ ಬಾಯಿ ನುಡಿಯಿತು.

"ನೀವು ಹಿರಿಯರು. ಇದರ ಬಗ್ಗೆ ನಿಮ್ಮೊಡನೆ ನಾನು ವಾದವಿವಾದ ಮಾಡಲು ಬಯಸುವದಿಲ್ಲ. ದಸ್ತಾವೇಜು ಈಗ ಇರಲಿ. ಅಂತಹ ಪ್ರಸಂಗ ಬಂದಾಗ ನಿಮಗೆ ಕರೆಕಳಿಸುವೆ" ಎಂದವಳೇ ಒಳಗೆ ನಡೆದಳು.

೨೪

ಏನೇ ಆಗಲಿ, ನಸುಕಿನಲ್ಲಿಯೇ ಕಲಕತ್ತೆಗೆ ಹೋಗಿ ಈ ವ್ಯಾಧನಿಂದ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕೆಂದು ಬಯಸಿದ್ದಳು. ಆದರೆ ಆವೇಶ ಇಳಿದು ತಿಳಿದು ನೋಡಿದಾಗ ಹಾಗೆ ಮಾಡುವುದರಿಂದ ಅಪವಾದ ಇನ್ನಷ್ಟು ಹೆಚ್ಚಬಹುದೆಂದು ಭಾವಿಸಿದಳು. ರಾಸಬಿಹಾರಿಯು ತನ್ನನ್ನು ಅಂಕೆಯಲ್ಲಿಟ್ಟುಕೊಳ್ಳುವುದಕ್ಕಾಗಿಯೇ ಈ ಜಾಲ ರಚಿಸಿರುವನೆಂದು ಆಕೆಗೆ ಗೊತ್ತಿತ್ತು. ಆದರೂ ಆಕೆಗೆ ಯಾರೊಬ್ಬರನ್ನು ಕಾಣುವುದಾದರೂ ನಾಚಿಕೆ ಎನಿಸುತ್ತಿತ್ತು. ಎರಡು ದಿನದ ನಂತರ ಕಾರಕೂನನೊಬ್ಬನು ಲೆಖ್ಖದ ಪಟ್ಟಿಯಲ್ಲಿ ಸಹಿ ಮಾಡಿಸಲು ಬಂದ. ಆತನನ್ನು ಮೇಲಕ್ಕೆ ಕರೆಸಿಕೊಂಡಳು. ಆತನ ಕಿವಿಯಲ್ಲೆಲ್ಲಿಯಾದರೂ ಈ ಸುದ್ದಿ ಬಿದ್ದಿದೆಯೋ ಎಂದು ಆಕೆಗೆ ಸಂಕೋಚ.

ತಂದೆಯ ಪತ್ರವನ್ನು ತೆಗೆದುಕೊಂಡು ನರೇಂದ್ರ ಬಂದರೂ ಬರಬಹುದೆಂಬ ಆಶೆ ಇದೆ. ಆದರೆ ಐದಾರು ದಿನದ ನಂತರ ಈ ಸಮಸ್ಯೆಯ ಇತ್ಯರ್ಥವಾಯಿತು. ಆತ ಬರಲಿಲ್ಲ. ಪತ್ರಗಳೆರಡೂ ಬಂದವು. ಆದರೆ ಪೋಸ್ಟಿನಿಂದ. ಆತನೇಕೆ ಬರಲಿಲ್ಲವೆಂಬುದರ ಕಾರಣವನ್ನು ಹುಡುಕಲು ಆಕೆಗೆ ಹೆಚ್ಚು ಹೊತ್ತು ಹಿಡಿಯಲಿಲ್ಲ. ರಾಸಬಿಹಾರಿಯೇ ಸೇಡಿಗಾಗಿ ಈ ಸುದ್ದಿ ಆತನ ಕಿವಿಗೆ ಹಾಕಲು ಹಿಂದೆ ಮುಂದೆ ನೋಡಿರಲಿಕ್ಕಿಲ್ಲವೆಂದು ಊಹಿಸಿದಳು. ಹೀಗಾಗಿ ತಾನು ಇಲ್ಲಿಂದ ಹೋದರೆ ಅಪವಾದಕ್ಕೆ ಪಕ್ಕಾಗುವುದರ ಹೊರತು ಇನ್ನಾವ ಆಸೆ ಇರಲಿಲ್ಲ.

ಇದೇ ರೀತಿಯಿಂದ ಆಕೆಯಲ್ಲೆಷ್ಟೋ ವಿಚಾರಗಳು ಬಂದು ಸುಳಿದು ಹೋದವು. ಮೇಲಿಂದ ಮೇಲೆ ಕಣ್ಣೊರಸಿಕೊಳ್ಳುತ್ತಿದ್ದಳು. ಕೊನೆಗೊಮ್ಮೆ ಎದ್ದು ತಂದೆಯ ಹಸ್ತಲಿಖಿತ ಎರಡೂ ಪತ್ರಗಳನ್ನು ಹಣೆಗೊತ್ತಿಕೊಂಡು ಬಿಕ್ಕಿ ಬಿಕ್ಕಿ ಅಳಹತ್ತಿದಳು. ಎರಡೂ ಪತ್ರವನ್ನೋದಬೇಕೆಂಬ ಇಚ್ಛೆ ಸಫಲವಾಗಲಿಲ್ಲ. ಅಂತೂ ಕೊನೆಗೊಮ್ಮೆ ಮುಗಿಸಿದಾಗ ತಂದೆಯ ಆಂತರಿಕ ಆಸೆ ಏನಿತ್ತೆಂಬುದನ್ನು ಅರಿತುಕೊಂಡಳು. ಅದಕ್ಕಾಗಿಯೇ ನರೇಂದ್ರನ ಬಗ್ಗೆ ಇಷ್ಟೆಲ್ಲ ಖರ್ಚು ಮಾಡಿದುದೆಂಬುದೂ ಗೊತ್ತಾಯಿತು. ಈ ಮಾತು ಇನ್ನಾರಿಗೆ ಗೊತ್ತಿರದಿದ್ದರೂ ರಾಸಬಿಹಾರಿಗೆ ಮಾತ್ರ ಗೊತ್ತಿರಲೇಬೇಕೆಂದು ಖಚಿತ ಮಾಡಿಕೊಂಡಳು.

ಹೀಗೆಯೇ ಐದಾರು ದಿನ ಕಳೆಯಿತು. ಒಂದು ದಿನ ನಿದ್ದೆ ತಿಳಿದೆದ್ದಾಗ ಮನೆಗೆಲ್ಲ ಸುಣ್ಣ ತೆಗೆಯುವ ಕೆಲಸ ನಡೆದಿತ್ತು. ಆಕೆಯ ಊಹೆಗೆ ಕಾರಣ ಸಿಲುಕದೆ ಹೋಗಲಿಲ್ಲ. ಇನ್ನೇನು ಹುಣ್ಣಿವೆಗೆ ೫-೬ ದಿನ ಮಾತ್ರ ಬಾಕಿ ಉಳಿದಿತ್ತು.

ಇಡೀ ದಿನ ಮೆಹನತ್ತಿನಿಂದ ಕೆಲಸ ಸಾಗಿತು. ಯಾರ ಅಪ್ಪಣೆಯಿಂದ ಈ ಕೆಲಸ ನಡೆಯುತ್ತದೆಂದಾಗಲೀ, ಇಲ್ಲವೆ ತನ್ನನ್ನು ಕೇಳದೆ ಏನು ಮಾಡುತ್ತೀರೆಂದಾಗಲೀ, ಯಾರನ್ನೂ ಕರೆದು ಕೇಳಲಿಲ್ಲ.

ಅನೇಕ ದಿನಗಳ ನಂತರ ಇಂದು ಕನ್ಹೈಸಿಂಹನನ್ನು ಕರೆದುಕೊಂಡು ನದಿಯ ತೀರಕ್ಕೆ ತಿರುಗಾಡಲು ಹೋಗಿದ್ದಳು. ಅಕಸ್ಮಾತ್ತಾಗಿ ದಯಾಲ ಬಂದು ನಿಂತರು. "ಮಗೂ, ನಿನ್ನನ್ನೇ ಹುಡುಕುತ್ತಿದ್ದೆ" ಎಂದರು.

ವಿಜಯೆ ಚಕಿತಳಾಗಿ ಕಾರಣವೇನೆಂದು ಕೇಳಿದಳು.

"ಮಗೂ, ಇನ್ನೇನೂ ತಡವಿಲ್ಲ. ಆಮಂತ್ರಣ ಪತ್ರಿಕೆ ಮುದ್ರಿಸಿ ಬಂಧು-ಬಾಂಧವರನ್ನೆಲ್ಲ ಸಾದರ ಪೂರ್ವಕವಾಗಿ ಕರೆಯಿಸಿಕೊಳ್ಳಬೇಕಾಗಿದೆ. ಅದಕ್ಕಾಗಿ ಅವರೆಲ್ಲರ ಹೆಸರು........"

"ನನ್ನ ಹೆಸರಿನಿಂದಲೇ ಆಮಂತ್ರಣ ಪತ್ರವನ್ನು ಮುದ್ರಿಸುವಿರಾ?" ಆಕೆಯ ಸ್ವರ ಕಠೋರವಾಗಿತ್ತು. "ಮುದ್ರಿಸುವಂತಿಲ್ಲ ಮಗೂ, ನಿಮ್ಮಿಬ್ಬರ ಹಿತಚಿಂತಕನಾದ ರಾಸಬಿಹಾರಿಯ ಹೆಸರಿನಿಂದ ಆಮಂತ್ರಣ ಕಳಿಸಲಾಗುವುದು. ಹಾಗೆಯೇ ನಿರ್ಧಾರವಾಗಿದೆ."

"ಅವರೊಬ್ಬರೇ ನಿಶ್ಚಯಿಸಿದರೇ?"

"ಹೌದು. ಅವರೇ ಮಾಡಿದರು."

"ಹಾಗಾದರೆ ಇದನ್ನೂ ಅವರೇ ನಿಶ್ಚಯಿಸಲಿ. ನನ್ನ ಬಂಧು ಬಳಗದವರಾರೂ ಇಲ್ಲ."

ದಯಾಲನಿಂದ ಇದಕ್ಕೆ ಉತ್ತರ ಕೊಡಲಾಗಲಿಲ್ಲ. ತಿರುಗಿ ಬರುವಾಗ "ನೀವು ನರೇಂದ್ರರಿಗೆ ಕೊಟ್ಟ ಪತ್ರವನ್ನು ಓದಿರುವಿರಾ ?" ಎಂದು ಕೇಳಿದಳು.

"ಇಲ್ಲ ಮಗಳೇ, ಹೆರವರ ಪತ್ರವನ್ನು ನಾನೇಕೆ ಓದಲಿ? ನರೇಂದ್ರನ ತಂದೆಯ ಹೆಸರನ್ನು ಅದರ ಮೇಲೆ ಕಂಡುದರಿಂದ ಅದು ನರೇಂದ್ರನ ಸೊತ್ತೆಂದು ಅವನಿಗೆ ಕೊಟ್ಟೆ. ನಿಮ್ಮೊಡನೆ ಕೇಳಿ ಕೊಡೋಣವೆಂದು ಒಮ್ಮೆ ಯೋಚಿಸಿದ್ದೆ. ಮಗೂ— ಏನಾದರೂ ಪ್ರಮಾದವಾಗಿದೆಯೇ?"

"ತಂದೆಯ ವಸ್ತುವನ್ನು ಮಗನಿಗೆ ಕೊಟ್ಟಿದ್ದು ಉಚಿತವೇ ಆಯಿತು. ಅವರು ಇದರ ವಿಷಯವಾಗಿ ನಿಮ್ಮೊಡನೆ ಏನಾದರೂ ಹೇಳಿರುವರೇ?"

"ಇಲ್ಲ, ಏನೂ ಇಲ್ಲ. ಏನಾದರೂ ಹೇಳುವದಿದ್ದರೆ ನಾಳೆ ಅವರ ಅಭಿಪ್ರಾಯವನ್ನು ಕೇಳಿ ತಿಳಿಸುವೆ."

ವಿಜಯೆ ಚಕಿತಳಾದಳು. "ನಾಳೆಯೇ ಹೇಗೆ ಕೇಳಿ ತಿಳಿಸುವಿರಿ?"

"ತಿಳಿಸಬಹುದೆಂದು ತೋರುತ್ತಿದೆ. ಯಾಕಂದರೆ ಸದ್ಯ ಅವರು ದಿನಾಲು ನಮ್ಮಲ್ಲಿಗೆ ಬರುತ್ತಾರೆ."

"ನಿಮ್ಮ ಪತ್ನಿಯವರ ಅಸ್ವಸ್ಥೆಯೇನು ಹೆಚ್ಚಾಯಿತೇ? ಇದರ ಬಗ್ಗೆ ನನಗೇನೂ ತಿಳಿಸಲಿಲ್ಲವಲ್ಲ !"

"ದೇವರ ದಯೆಯಿಂದ ನರೇಂದ್ರನ ಚಿಕಿತ್ಸೆಯಿಂದ ಹಾಗೇನೂ ಇಲ್ಲ. ಈಗ ಚೆನ್ನಾಗಿದ್ದಾರೆ."

"ಹಾಗಾದರೆ ಅವರೇಕೆ ದಿನಾಲು ಬರುವರು ?"

"ಮಗಳೇ, ಜನ್ಮಭೂಮಿಯ ಮೋಹ ಬೇಗನೇ ಬಿಡತಕ್ಕದ್ದೆಂದು ಭಾವಿಸಿದೆಯಾ? ಅದರ ಹೊರತಾಗಿ ಕಲಕತ್ತೆಯಲ್ಲಿ ಈವಾಗ ಕೆಲಸವೂ ಕಡಿಮೆ ಇದೆ. ತನ್ನವರೆನ್ನುವವರು ಅಲ್ಲಿ ಯಾರೂ ಇಲ್ಲ— ಅದಕ್ಕಾಗಿ ಸಂಜೆಯ ಹೊತ್ತು ಇಲ್ಲಿಯೇ ಕಳೆಯುತ್ತಾರೆ. ನಮ್ಮನೆಯವಳಂತೂ ಅವನನ್ನು ಕಂಡರೆ ಪ್ರಾಣ— ಹುಡುಗನೂ ಅಂಥವನೇ. ಮಾತಾಡುತ್ತ ನಾವು ಇಲ್ಲಿಯ ವರೆಗೆ ಬಂದಿದ್ದೇವೆ. ಇನ್ನೆರಡು ಹೆಜ್ಜೆ ಹೋದರೆ ಮನೆ ಬಂದಿತು. ಮಗೂ, ಅಲ್ಲಿಯವರೆಗೆ ಬಂದು ಹೋಗಬಾರದೇ ?

"ಹೋಗುವಾ" ಎಂದು ಹಿಂಬಾಲಿಸಿದಳು.

"ನನ್ನ ಆಯುಷ್ಯದಲ್ಲಿಯೇ ಇಂತಹ ಸಜ್ಜನ ವ್ಯಕ್ತಿಯನ್ನೆಂದೂ ನೋಡಿರಲಿಲ್ಲ. ನಲಿನಿಗೆ B. A. ಕಲಿತು ವೈದ್ಯಕೀ ಓದುವ ಲವಲವಿಕೆ ಯಿದೆ. ನರೇಂದ್ರ ಆಕೆಗೆ ತುಂಬಾ ಪ್ರೋತ್ಸಾಹಿಸುತ್ತಿದ್ದಾನೆ. ನರೇಂದ್ರನ ಸಹಾಯದಿಂದ ನಲಿನಿ ಎಷ್ಟೋ ಪುಸ್ತಕಗಳನ್ನು ಓದಿ ಮುಗಿಸಿದ್ದಾಳೆ. ಓದುವುದೆಂದರೆ ಇಬ್ಬರಿಗೂ ಪ್ರಾಣ" ಎಂದನು.

ಅವರಿಬ್ಬರೂ ಮನೆ ಮುಟ್ಟಿದಾಗ ಕತ್ತಲೆಯಾಗಿತ್ತು. ಒಂದು ಟೇಬಲಿನ ಎದುರಿಗೆ ನರೇಂದ್ರ ನಲಿನಿ ಇಬ್ಬರೂ ಖುರ್ಚಿಯ ಮೇಲೆ ಕುಳಿತಿದ್ದರು. ಮುಂದೆ ತೆರೆದ ಪುಸ್ತಕವಿತ್ತು. ಅಕ್ಷರ ಚನ್ನಾಗಿ ಕಾಣಿಸುತ್ತಿದ್ದಿಲ್ಲವಾದುದ ರಿಂದ ಅವರು ಓದುವುದನ್ನು ಬಿಟ್ಟು ಅದರ ಬಗ್ಗೆ ವಿಮರ್ಶೆ ನಡೆಯಿಸಿದ್ದರು. ಮೊದಲು ವಿಜಯೆಯನ್ನು ನಲಿನಿ ಕಂಡಳು. ಕೂಡಲೇ ನರೇಂದ್ರನೆದ್ದು ನಮಸ್ಕರಿಸಿ :"ಹೇಗಿರುವಿರಿ?" ಎಂದ. ಕತ್ತಲೆಯಾದುದರಿಂದ ವಿಜಯೆಯ ಮ್ಲಾನ ವದನ ಅವರ ಕಣ್ಣಿಗೆ ಬೀಳಲಿಲ್ಲ.

ವಿಜಯೆಯು ಪ್ರತಿ ನಮಸ್ಕಾರವನ್ನು ಮಾಡಲಿಲ್ಲ. ಉತ್ತರವನ್ನೂ ಕೊಡಲಿಲ್ಲ. ನೋಡದವರಂತೆ ಆತನ ಕಡೆಗೆ ಬೆನ್ನು ತಿರುವಿ "ನಲಿನೀ, ಆ ಮೇಲೆ ನೀನು ಒಮ್ಮೆಯೂ ಅತ್ತ ಹಾಯಲಿಲ್ಲವಲ್ಲ" ಎಂದಳು. ನಲಿನಿಯ ಪ್ರೇಮದಿಂದಲೇ ನರೇಂದ್ರನು ದಿನಾಲು ಇಲ್ಲಿ ಬರುತ್ತಾನೆಂದು ಭಾವಿಸಿದಳು.

ನರೇಂದ್ರನು ಆ ಬದಿಗೆ ನಗುತ್ತ ಬಂದ. ''ನನ್ನ ಗುರುತು ಸಹ ಹತ್ತಲಿಲ್ಲವೇನು ?''

''ಗುರುತಾದವರ ಗುರುತು ಅಷ್ಟೇನೂ ಅವಶ್ಯಕವಲ್ಲ. ನಲಿನಿ, ನಿಮ್ಮ ಚಿಗವ್ವೆಯೊಡನೆ ಮಾತಾಡಿ ಬರೋಣವಂತೆ.'' ಎಂದವಳೇ ನಲಿನಿಯನ್ನು ಎಳೆಯುತ್ತ ಮೇಲಕ್ಕೆ ಕರೆದುಕೊಂಡು ಹೋದಳು. ನಲಿನಿಯು ಅಲ್ಲಿಂದಲೇ ''ನರೇಂದ್ರಬಾಬು, ಚಹಾಕುಡಿದ ಹೊರತು ಎಲ್ಲಿಯೂ ಹೋಗಬೇಡಿ'' ಎಂದಳು.

ನರೇಂದ್ರನಿಗೆ ಉತ್ತರ ಕೊಡಲಾಗಲಿಲ್ಲ. ಆತನಿಗೆ ವಿಸ್ಮಯ ಒಂದೆಡೆ ಅಪಮಾನ ಇನ್ನೊಂದೆಡೆ. ಕೆಲಹೊತ್ತಿನ ಮೇಲೆಚಹ ಕುಡಿಯಲು ಆಮಂತ್ರಣ ಬಂದಿತು. ನರೇಂದ್ರ ದಯಾಲನ ಒತ್ತಾಯದ ಬಿನ್ನಹವನ್ನೂ ಮನ್ನಿಸಲಿಲ್ಲ. ಅದರಿಂದ ದಯಾಲನ ಮನಸ್ಸು ನೋಯಬಹುದೆಂದು ''ನಾನಂತೂ ಮನೆಯ ಮನುಷ್ಯ. ನನ್ನ ಕಾಳಜಿ ಬಿಡಿ ದಯಾಲಬಾಬು, ನೀವು ನಿಮ್ಮ ಮಾನ್ಯ ಅತಿಥಿಗಳನ್ನು ಉಪಚರಿಸುವುದು ಆವಶ್ಯಕ'' ಎಂದ.

ದಯಾಲನಿಗೂ ದುಃಖ ಹಾಗೂ ಲಜ್ಜೆಯೆನಿಸಹತ್ತಿತು. ''ಹಾಗಾದರೆ ತುಸು ಹೊತ್ತು ತಡೆಯುವಿರಾ?''

ನೌಕರ ದೀಪ ಇಟ್ಟು ಹೋಗಿದ್ದ. ನರೇಂದ್ರ ತೆರೆದ ಪುಸ್ತಕವನ್ನು ಹತ್ತಿರಕ್ಕೆ ಎಳೆದುಕೊಂಡು ಗೋಣಲ್ಲಾಡಿಸಿ ''ಹೌದು. ಅವಶ್ಯವಾಗಿ ಕೂಡ್ರುವೆ" ಎಂದ.

ಸುಮಾರು ಅರ್ಧ ಘಂಟೆಯ ನಂತರ ಮೂವರೂ ಕೆಳಗಿಳಿದು ಬಂದರು. ನರೇಂದ್ರ ಪುಸ್ತಕವನ್ನಿಟ್ಟು ಉದ್ದನಿಂತ.

''ನಿಮ್ಮ ಚಹಾ ಇಲ್ಲೇ ತರಲು ಹೇಳಿರುವೆ, ನರೇಂದ್ರಬಾಬು, ಈಗಲೇ ಬರಲಿದೆ,'' ಎಂದಳು ನಲಿನಿ.

ಆದರೆ ವಿಜಯೆ ಮಾತಾಡಲಿಲ್ಲ. ಇಷ್ಟೇ ಅಲ್ಲ; ಅತ್ತ ಮೋರೆ ಹಾಕಲಿಲ್ಲ. ಹಾಗೆಯೇ ಸಾವಕಾಶ ಹೊರಬಿದ್ದಳು. ಬಾಗಿಲ ಹತ್ತಿರ ಕುಳಿತ ಕನ್ಹೈಯಸಿಂಹ ಎದ್ದುನಿಂತ. ವಿಜಯೆ ಹೊರಬಂದು ನೋಡಿದಾಗ ಆಕಾಶದಲ್ಲಿ ಮೋಡದ ಹೆಸರಿರಲಿಲ್ಲ. ನವಮಿಯ ಚಂದ್ರ ಚನ್ನಾಗಿ ಬೆಳಗುತ್ತಿದ್ದ. ಆಕಾಶ, ಮೈದಾನ, ಹಳ್ಳಿ, ನದಿಯ ಜಲ— ಇವೆಲ್ಲ ಒಂದರಿಂದೊಂದು ಭಿನ್ನವಾಗಿ ನಿಂತಂತೆ ಭಾಸವಾಯಿತು. ಒಬ್ಬರೊಡನೆ ಒಬ್ಬರ ಸಂಬಂಧವಿಲ್ಲ; ಒಬ್ಬರಿಗೊಬ್ಬರ ಪರಿಚಯವಿಲ್ಲ. ಅವರೆಲ್ಲ ನಿದ್ರಿಸುತ್ತಿದ್ದಾಗ ಯಾರೋ ಒಬ್ಬೊಬ್ಬರನ್ನೇ ತಂದು ಒಂದೊಂದೆಡೆಯಲ್ಲಿಟ್ಟರು. ಈಗ ಅವರೆಲ್ಲ ಚಕಿತರಾಗಿ ಒಬ್ಬರನ್ನೊಬ್ಬರು ನೋಡುತ್ತಲಿದ್ದಾರೆ. ನಡೆಯುತ್ತಿದ್ದಾಗ ಕಣ್ಣೀರು ಸುರಿಯಿತು ಅದನ್ನು ಒರಸುತ್ತ "ಇನ್ನು ಸಹನೆ ಮೀರಿತು. ಸಹಿಸಲಾರೆ" ಎಂದು ಮೇಲಿಂದ ಮೇಲೆ ಹೇಳುತ್ತ ಹೋಗುತ್ತಿದ್ದಳು.

ಮನೆಗೆ ಬಂದೊಡನೆಯೇ ರಾಸಬಿಹಾರಿಯು ಸಾಯಂಕಾಲದಿಂದ ದಾರಿಕಾಯುತ್ತಿರುವನೆಂದು ತಿಳಿಯಿತು. ಕೇಳಿದೊಡನೆಯೇ ಆಕೆಗೆ ತಿರಸ್ಕಾರವೆನಿಸಿ ಮಾಳಿಗೆಯ ಮೇಲಿನ ತನ್ನ ಕೋಣೆಗೆ ಹೋದಳು. ಆದರೆ ಎಷ್ಟೇ ತಡ ಮಾಡಿದರೂ ರಾಸಬಿಹಾರಿಯು ತಾಳ್ಮೆಗೆ ಮಿತಿ ಇಲ್ಲವೆಂದು ಆಕೆಗೆ ಗೊತ್ತು. ಎಷ್ಟೇ ಕತ್ತಲಾದರೂ ಮಾತಾಡಿಯೇ ಹೋಗುವನೆಂದು ಆಕೆ ಅರಿತಿದ್ದಳು.

ಕೆಲಹೊತ್ತಿನಲ್ಲಿಯೇ ಪರೇಶ ಬಂದು ದೊಡ್ಡರಾಯರು ಬರುತ್ತಾರೆಂದು ಹೇಳಿಹೋದ. ಅಷ್ಟರಲ್ಲಿಯೇ ಅವರ ಹೆಜ್ಜೆಯ ಸದ್ದು ಕೇಳಿಸಹತ್ತಿತು.

"ಬನ್ನಿ" ಎಂದಳು ವಿಜಯೆ.

ಒಳಗೆ ಬಂದು ಕುರ್ಚಿಯಲ್ಲಿ ಕುಳಿತ. "ಇಷ್ಟೊಂದು ನೌಕರರಿದ್ದಾರೆಂದು ಒಬ್ಬರಿಗಾದರೂ ಲಾಟನು ತೆಗೆದುಕೊಂಡು ಹೋಗಲು ಹೊಳೆಯಬಾರದೇ? ದಯಾಲನಿಗಾದರೂ ಬರೇ ಬೆಳದಿಂಗಳ ಮೇಲೆ ಅವಲಂಬಿಸದೆ ಲಾಟನು ಕೊಡಲು ತಿಳಿಯಬಾರದಿತ್ತೇ? ದೇವರೇ, ತನ್ನವರು ಪರಕೀಯರು ಎಂಬ ಭಾವನೆ-ಕಲ್ಪನೆ ಹೇಗೆ ಇಟ್ಟಿರುವಿಯಪ್ಪಾ!— ಇರಲಿ. ಮಾಡಬೇಕಾದುದನ್ನೆಲ್ಲ ನಾನು ಮಾಡಿಟ್ಟಿರುವೆ. ನಿಮ್ಮ ಹೆಸರೊಂದು

ಬರೆಯುವುದು ಬಾಕಿ ಇದೆ. ನಾಳೆಯೇ ಹೋಗಬೇಕು" ಎಂದು ಆ ಕಾಗದ ವನ್ನು ವಿಜಯೆಯ ಕೈಗಿತ್ತನು.

ಅದು ಬ್ರಾಹ್ಮ ಧರ್ಮಕ್ಕನುಸರಿಸಿ ರಜಿಸ್ಟ್ರಿ ಮಾಡುವ ದಸ್ತಾವೇಜು ಎಂದು ಆಕೆಗೆ ನೋಡಿದೊಡನೆ ಹೊಳೆಯಿತು. ಮುದ್ರಿತವಾದ ಹಾಗೂ ಕೈಯ್ಯಿಂದ ಬರೆದುದನ್ನೆಲ್ಲ ಎರಡು ಮೂರು ಸಲ ಮನದಲ್ಲಿ ಓದಿ ತಲೆ ಯೆತ್ತಿದಳು. ಅಷ್ಟೇ ವೇಳೆಯಲ್ಲಿ ಆಕೆಯ ಮನದಲ್ಲೊಂದು ಅದ್ಭುತ ವ್ಯಾಪಾರ ನಡೆದಿತ್ತು. ಆಕೆಯ ದುಃಖವೆಲ್ಲ ಒಂದು ರೀತಿಯ ಉದಾಸೀನತೆ ಯಲ್ಲಿ ಪರಿವರ್ತನ ಹೊಂದಿತು. ಜಗತ್ತಿನ ಜನರೆಲ್ಲ ಒಂದೇ ರೀತಿಯವರೆಂದು ಆಕೆಗನಿಸಿತು. ರಾಸಬಿಹಾರಿ, ದಯಾಲ, ವಿಲಾಸ, ನರೇಂದ್ರ— ಎಲ್ಲರೂ ಒಂದೇ ಮಾಲಿಕೆಯೊಳಗಿನ ಮಣಿ. ಯಾರು ಹೆಚ್ಚು ಯಾರು ಕಡಿಮೆಯೆಂಬು ದಿಲ್ಲ. ಬುದ್ಧಿ ವಯಸ್ಸು ಇವುಗಳಿಂದ ಏನಾದರೂ ಭೇದ ಕಂಡರೆ ಕಾಣ ಬೇಕು. ಇಲ್ಲವಾದರೆ ವೈಯ್ಯಕ್ತಿಕ ಸುಖ ಸೌಕರ್ಯಕ್ಕಾಗಿ— ನೀಚತನದಲ್ಲಿ, ಕೃತಘ್ನತೆಯಲ್ಲಿ, ನಿರ್ಮಮ ನಿಷ್ಠುರತೆಯಲ್ಲಿ ಹೆಣ್ಣಿಗೆ ಇವರೆಲ್ಲ ಒಂದೇ. ಇಂದು ದಯಾಲನ ಆಚರಣೆಯೇ ಹೆಚ್ಚು ಆಕೆಯ ಮನವನ್ನು ಕೊರೆಯು ತ್ತಿತ್ತು. ಆ ದಯಾಲನ ಬಗ್ಗೆ ತಾನು ಏನೇನನ್ನು ಮಾಡಿಲ್ಲ! ಆತನಿಗೆ ನನ್ನ ಅಂತರ್ಯವು ಗೊತ್ತಿದ್ದರೂ ಹೀಗೆ ಮಾಡಬೇಕೇ ? ನಾನು ಆತನನ್ನು ಶ್ರದ್ಧೆಯಿಂದ ಕಂಡಿದ್ದೇನೆ. ಆತ್ಮೀಯನೆಂದು ಬಗೆದಿದ್ದೇನೆ. ರಾಸಬಿಹಾರಿಗೂ ನನಗೂ ಭೇದ ಬಂದುದೆಲ್ಲಿ? ಸದ್ಯ ನರೇಂದ್ರನ ಬಗ್ಗೆ ಆಕೆ ಯೋಚಿಸಿರಲಿಲ್ಲ. ಈಗಲೂ ಆತನ ಎಚ್ಚರವಾಗಲಿಲ್ಲ. ಎಲ್ಲರೂ ಸಮಾನರೆಂದ ಬಳಿಕ ವಿಲಾಸ ನೊಬ್ಬನನ್ನೇ ತಾನು ದೂಷಿಸುವದೇಕೆ? ಅಷ್ಟೇ ಅಲ್ಲ; ಆತನೇ ಎಲ್ಲರಿಗಿಂತ ನಿರ್ದೋಷಿಯಾಗಿದ್ದಾನೆ. ಆತನೇ ಎಲ್ಲರಿಗಿಂತ ಕಡಿಮೆ ತಪ್ಪು ಮಾಡಿದಾತ. ಅವನು ಮಾತ್ರ ತನ್ನ ಮಾತಿನಂತೆ ನಡೆದಿದ್ದಾನೆ. ಅವನು ಮಾಡಿದ ಅಪರಾಧ ಗಳೆಲ್ಲ ಕೇವಲ ನನ್ನ ಸಲುವಾಗಿಯೇ. ಕುಸು ಹೊತ್ತು ಮನನ ಮಾಡಿ ವಿಲಾಸನ ಪ್ರೇಮವೊಂದೇ ಸತ್ಯ ಹಾಗೂ ಸಜೀವವಾದದ್ದೆಂದು ಭಾವಿಸಿದಳು. ಆತನ ತಪ್ಪಿದ್ದರೂ ಶಿಕ್ಷಿಸುವ ಅಧಿಕಾರ ತನಗಿಲ್ಲ.

"ಹಾಗಾದರೆ ಮಗೂ, ದೌತಿ ಲೆಖ್ಖಣಿಕೆ ಇಲ್ಲಿದೆಯೋ ಅಥವಾ ಕೆಳಗಿ ನಿಂದ ತರಿಸಬೇಕೋ?" ಆಕೆಯ ವಿಚಾರಕ್ಕೆ ತಡೆಬಿದ್ದಿತು. "ಕಾಕಾಜೀ,

ಎಂತಹ ದೊಡ್ಡ ಅಪರಾಧವಾದರೂ ದುಡ್ಡಿನ ಮುಂದೆ ಮನ್ನಿಸಲ್ಪಡುತ್ತಿದೆ ಯಲ್ಲವೇ?"

ರಾಸಬಿಹಾರಿಗೆ ಸರಿಯಾಗಿ ಅರ್ಥವಾಗಲಿಲ್ಲ. "ಏನು? ಹಾಗೆಂದರೇನು ಮಗೂ?"

''ನಾನು ಮಾಡಿದ ಪಾಪವನ್ನು ಸಹ ಲಕ್ಷ್ಯಕ್ಕೆ ತಾರದೆ, ನನ್ನನ್ನು ಸೊಸೆಯಾಗಿ ಪರಿಗ್ರಹಿಸುವಿರಾ?''

''ಅದು ಸುಳ್ಳು ಮಗೂ. ನಿಮ್ಮ ಬಗ್ಗೆ ಎಂತಹ ಶತ್ರುವೂ ಹಾಗೆ ಅಪವಾದವಿಡಲಾರ.''

'' ಶತ್ರುವೂ ಹೇಳಲಾರನೆಂದು ಬಲ್ಲೆ. ಆದರೆ ವಿಲಾಸಬಾಬುವು ಅಕುಟಿಲೆಯೆಂದು ಭಾವಿಸಬಲ್ಲನೇ?"

''ಭಾವಿಸಲಾರನೇ ? ನನ್ನ ವಿಲಾಸ ?— ನಿಮ್ಮನ್ನು?" ಎಂದವನೇ ವಿಲಾಸನನ್ನು ಕರೆಯಹತ್ತಿದ.

ಇದನ್ನೇ ಹಾರೈಸುತ್ತಿದ್ದ ವಿಲಾಸ ಒಳಗೆ ಬಂದ. ''ವಿಲಾಸ, ನೀನು ಮೊದಲಿನಂತೆಯೇ ಈಕೆಯನ್ನು ನೋಡಲಿಕ್ಕಿಲ್ಲವೇ?".

ವಿಲಾಸ ಉತ್ತರ ಕೊಡಲಿಲ್ಲ. ಪ್ರಶ್ನೆಯ ಅರ್ಥವಾಗದವನಂತೆ ಸುಮ್ಮನೆ ನಿಂತುಕೊಂಡ.

''ನಾನು ಒಂದು ರಾತ್ರಿ ನರೇಂದ್ರನೊಡನೆ ಆಮೋದ ಪ್ರಮೋದದಲ್ಲಿ ಕಳೆದೆನೆಂದು ಕಾಕಾಜಿಯವರು ಹೇಳಿದ್ದರು. ಇಂತಹ........''

''ಎಂದೂ ಇಲ್ಲ. ಹಾಗೆಂದೂ ಇಲ್ಲ. ಇದು ಕೇವಲ ಸುಳ್ಳು........"

ವಿಲಾಸನ ಮೋರೆ ಕಪ್ಪಿಟ್ಟಿತು. ''ಇಲ್ಲ. ಇವನ್ನು ನಾನೆಂದೂ ಕೇಳಿರಲಿಲ್ಲ.''

''ಇದು ಶೀರಾ ಸುಳ್ಳು ವಿಲಾಸ. ನೀನರಿಯೆ— ಅದಕ್ಕಾಗಿ ಆ ನೌಕರರನ್ನೂ-ಪರೇಶನನ್ನೂ ಶಿಕ್ಷಿಸುವೆ........''

''ಜಗತ್ತಿನ ಜನರೆಲ್ಲ ಸಾಕ್ಷಿ ಹೇಳಿದರೂ ನಾನು ನಂಬುವಂತಿಲ್ಲ."

''ಯಾಕೆ? ನನ್ನ ಹಣದ ಸಲುವಾಗಿಯಲ್ಲವೇ?''

"ಇಲ್ಲ. ನಿಮ್ಮ ಸಂಪತ್ತಿನ ಆಸೆ ನನಗೆ ಎಳ್ಳಷ್ಟೂ ಇಲ್ಲ. ಬ್ರಾಹ್ಮ ಪದದಲ್ಲಿ ಆತ್ಮಸಮರ್ಪಣೆ ಮಾಡಿದವರು ಅಗ್ನ್ಯಾಯವನ್ನೆಂದಿಗೂ ಮಾಡಲಾರೆವು. ನಿಮ್ಮ ಮೇಲೆ ನಮಗಾಸೆ ಇದೆಯೇ ಹೊರತು ನಿಮ್ಮ ಧನದ ಮೇಲಲ್ಲ."

"ಇದು ನಿಜವೇ?" ಆಕೆಯ ಕಣ್ಣಿನಲ್ಲಿ ಆಸೆ ತುಂಬಿತ್ತು.

"ನನ್ನ ಮನಸ್ಸಿನ ಸಾಕ್ಷಿಯಾಗಿಯೂ ನಾನು ದಿಟವನ್ನೇ ಹೇಳುತ್ತಿರುವೆ".

ಆಕೆಯ ಮನಸ್ಸು ಸಹಿ ಮಾಡಬೇಕೋ, ಮಾಡಬಾರದೋ ಎಂದು ಯೋಚಿಸಿತು. ಕೊನೆಗೊಮ್ಮೆ ದೊಡ್ಡ ದೊಡ್ಡ ಅಕ್ಷರಗಳಿಂದ ಸಹಿ ಮಾಡಿ ರಾಸಬಿಹಾರಿಯ ಕೈಯಲ್ಲಿ ಕೊಟ್ಟಿದ್ದಳು.

ರಾಸಬಿಹಾರಿ ಅದನ್ನು ಮಡಚಿ ಕಿಸೆಯಲ್ಲಿಟ್ಟು ವನವೀರನ ಸಲುವಾಗಿ ಕಣ್ಣೀರು ಸುರಿಸಿ, ದೇವರ ಗುಣಗಾನ ಮಾಡಿ ಕೆತ್ತಲಿಯಾಯಿತೆಂದು ಹೊರಟುಹೋದ.

ಆ ಮೇಲೆ ವಿಲಾಸ ಗಂಭೀರವಾಗಿ ನುಡಿದ. "ವಿಜಯಾ, ನೀನು ನನನ್ನು ಪ್ರೀತಿಸುವದಿಲ್ಲವೆಂದು ಬಲ್ಲೆ. ಅವರೆ ಜನಸಾಮಾನ್ಯರು ತಿಳಿಯು ವಂತೆ ಪ್ರೇಮವೇ ಎಲ್ಲಕ್ಕೂ ಶ್ರೇಷ್ಠವಾದುದಲ್ಲ. ಹಾಗೆ ಭಾವಿಸಿದ್ದೆನಾದರೆ ನೀನು ಪ್ರೀತಿಸುವವನನ್ನೇ ವರಿಸೆಂದು ಹೇಳುತ್ತಿದ್ದೆ. ಆ ಉದಾರತೆ, ತ್ಯಾಗ, ಶಕ್ತಿ, ನನ್ನಲ್ಲಿದೆ. ನಾನು ಸುಮ್ಮನೆ ಶಿಕ್ಷಣ ಹೊಂದಿಲ್ಲ. ಆದರೆ ಈ ರೂಪತೃಷ್ಣೆಯೇ ಬ್ರಾಹ್ಮ ಕುಮಾರ-ಕುಮಾರಿಯರ ವಿವಾಹದ ಅಂತಿಮ ಧ್ಯೇಯವಾಗಲಾರದು. ಅದರ ಉದ್ದೇಶ ಸತ್ಯ, ಮುಕ್ತಿ, ಪರಬ್ರಹ್ಮನ ಪಾದತಲದಲ್ಲಿ ಎರಡು ಆತ್ಮಗಳ ಆತ್ಮಾರ್ಪಣ. ಒಂದಲ್ಲ ಒಂದು ದಿನ ನನ್ನಲ್ಲಿ ಈ ಮಾತಿನ ಸತ್ಯತೆಯನ್ನು ಕಾಣುವಿ. ವಿಜಯಾ, ನರೇಂದ್ರನು ಬರುವುದಕ್ಕಿಂತ ಮೊದಲಿನ ಸ್ಥಿತಿಯನ್ನೊಮ್ಮೆ ಸ್ಮರಿಸು."

ಏನೋ ಹೇಳಬೇಕೆಂದು ಮಾಡಿದ್ದಳು. ಆದರೆ ಸಾಧ್ಯವಾಗಲಿಲ್ಲ. ಎರಡೂ ಕೈ ಜೋಡಿಸಿ, ಹತ್ತಿರದ ಬಾಗಿಲಿನಿಂದ ಒಳಹೊಕ್ಕಳು.

## ೨೫

ತನ್ನನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡ ಹೊರತು ಆಕೆಗೆ ಸಮಾಧಾನವಾಗಲಿಲ್ಲ. ಮುಂಜಾನೆ ಎದ್ದಾಗ ಮನಸ್ಸು ಹಗುರವಾಗಿತ್ತು. ಚಂಚಲತೆ ಇರಲಿಲ್ಲ. ಹಿಂದೆ ಪ್ರತಿದಿನವೂ ತನ್ನ ಎಷ್ಟೋ ವೇಳೆ ಬೇಸರದಲ್ಲಿ ಹೋಗುತ್ತಿದ್ದುದನ್ನು ಜ್ಞಾಪಿಸಿಕೊಂಡಳು. ಆಕೆಗೆ ಇಂದು ಎಲ್ಲೆಡೆಯಲ್ಲಿ--ಪ್ರಕೃತಿಯಲ್ಲಿಯೂ ಶಾಂತತೆ ಕಂಡುಬಂದಿತು. ಒಂದೇ ರಾತ್ರಿಯಲ್ಲಿ ಅವೆಲ್ಲ ಋಷಿಮುನಿಗಳ ವಾಸಸ್ಥಾನವಾದಂತೆ ಭಾಸವಾಯಿತು.

ಇನ್ನೂ ಕೆಲಹೊತ್ತು ಮಲಗಿರಬೇಕೆಂದು ಬಯಸಿದಳು. ಆದರೆ ದಿನಾಲು ಬೇಗನೆ ಏಳುವವಳು ಇನ್ನೂ ಏಕೆ ಎದ್ದಿಲ್ಲವೆಂದು ಪರೇಶನ ತಾಯಿ ಕೂಗಹತ್ತಿದಳು. ಎದ್ದು ಬಾಗಿಲ ತೆರೆದ ಹೊರತು ಬಿಡಲಿಲ್ಲ.

ಕೈಕಾಲು ಮೋರೆ ತೊಳೆದು ಬೇರೆ ಸೀರೆಯುಟ್ಟು ಕೆಳಗೆ ಬರುವಷ್ಟರಲ್ಲಿ ರಾಸಬಿಹಾರಿಯೇ ಕೆಲಸದ ಮೇಲ್ವಿಚಾರಣೆ ನಡೆಯಿಸುತ್ತಿದ್ದುದು ಕಂಡುಬಂತು. ಎರಡೇ ದಿನ ಬಾಕಿ ಇದೆ. ಅಷ್ಟರಲ್ಲಿಯೇ ಸಾರಣೆ ಕಾರಣೆ ಮುಗಿಯಬೇಕಾಗಿದೆ.

ಬೇಕಾದುದಾದರೂ ಸಿನ್ನೆಯ ನಿಶ್ಚಯ ಪರಿವರ್ತಿಸಲಿಕ್ಕಿಲ್ಲವೆಂದು ಸಂಕಲ್ಪಿಸಿದ್ದಳು. ದೇವರ ಕಾರುಣ್ಯದಿಂದ ಎಲ್ಲವೂ ಸರಿಹೋದೀತೆಂದ ಭಾವಿಸಿದ್ದಳು. ಹಾಗೆ ಒಮ್ಮೆಲೇ ರಾಸಬಿಹಾರಿಯನ್ನು ಕಂಡು ಮೇಲಕ್ಕೆ ಬಂದಳು. ಅಲ್ಲಿ ಕೆಲಹೊತ್ತು ಅಡ್ಡಾಡಿದರೂ ಹೊತ್ತು ಹೋಗದಿರಲು ತನ್ನ ಕೋಣೆಯಲ್ಲಿ ಬಂದು ಬಾಲ್ಯಬಂಧುವಿಗೊಂದು ಓಲೆ ಬರೆಯಲೆಂದು ಕುಳಿತಳು. ಆಕೆಯ ಮನದಲ್ಲಿ ವೇದನೆ ತುಂಬಿದ್ದಿತು. ಅವನ್ನೆಲ್ಲ ಪತ್ರದಲ್ಲಿ ಮೂಡಿಸಲು ಯತ್ನಿಸಿದಳು. ಅದರಿಂದ ಪತ್ರ ಬರೆಯುವುದರಲ್ಲೇ ಮಗ್ನಳಾದಳು. ಹೇಗೆ ಹೊತ್ತು ಹಾರಿತೋ, ಎಷ್ಟು ಕಣ್ಣೀರು ಹರಿಯಿತೋ—ಎಂಬುದೇ ಆಕೆಗೆ ಗೊತ್ತಿಲ್ಲ. ಇಷ್ಟರಲ್ಲಿ ಪರೇಶನ ತಾಯಿ ಬಂದು "ದನಿಯರೇ, ಒಂದು ಗಂಟೆಯಾಯಿತು. ಇನ್ನೂ ಊಟವಾಗಿಲ್ಲ. ಅದೋ, ನರೇಂದ್ರಬಾಬೂ ಬಂದರು" ಎಂದಳು.

ನರೇಂದ್ರ ಹಿಂದೆಷ್ಟೋ ಸಲ ಬಂದಿದ್ದ. ಆದರೆ ಈ ರೀತಿ ತಾನು ಬಂದ ಸುದ್ದಿ ತಿಳಿಸದೆ ಬರಬಹುದೆಂದು ಆಕೆ ಊಹಿಸಿರಲಿಲ್ಲ. ಆತನ ಮೋರೆ

ಒಣಗಿತ್ತು. ಹೊಟ್ಟು ಕೂದಲು ಅಸ್ತವ್ಯಸ್ತವಾಗಿತ್ತು. ಬಂದವನೇ ಖುರ್ಚಿ ಯೊಂದನ್ನೆಳೆದು ಕೂತು "ಆ ದಿನ ನನ್ನೊಡನೆ ಏಕೆ ಮಾತಾಡಲು ಇಚ್ಛಿಸ ಲಿಲ್ಲ ಹೇಳಿ ನೋಡುವಾ" ಎಂದನು. ಆತನ ಬಾಡಿದ ಮೋರೆಯನ್ನೆಲ್ಲ ಕಂಡು ಆಕೆಗೆ ಶುಂಬ ದುಃಖವಾಯಿತು. "ನರೇಂದ್ರಬಾಬೂ, ನಿಮಗೇನಾಗಿದೆ? ಪ್ರಕೃತಿ ಚೆನ್ನಾಗಿಲ್ಲವೇ?"

"ಇಲ್ಲ. ಪ್ರಕೃತಿ ಚೆನ್ನಾಗಿದೆ. ಸಣ್ಣ ಜ್ವರ ಬಂದಿತ್ತು. ಅದರಿಂದ ಅಶಕ್ತತೆಯಾಯಿತು. ಇಲ್ಲವಾದರೆ ಒಂದೆರಡು ದಿನ ಮೊದಲೇ ಬರುತ್ತಿದ್ದೆ. ಆ ದಿನ ನಾನು ಮಾಡಿದ ತಪ್ಪಾವುದೆಂದು ಹೇಳಿ."

ಪರೇಶ ಅಲ್ಲಿ ನಿಂತಿದ್ದ. "ತುಸು ಫಲಾಹಾರ ತರಲು ತಾಯಿಗೆ ಹೇಳು" ಎಂದಳು ವಿಜಯೆ. ನರೇಂದ್ರನಿಗೆ "ಬೆಳಗ್ಗಿನಿಂದ ನೀವೇನೂ ತೆಗೆದುಕೊಂಡ ಹಾಗೆ ಕಾಣುವದಿಲ್ಲ" ಎಂದಳು.

"ಆದರೆ, ನನಗದರ ಚಿಂತೆ ಇಲ್ಲ."

"ಆದರೆ ನನಗದರ ಕಾಳಜಿ ಇದೆ" ಎಂದು ತಾನೇ ಎದ್ದು ಕೆಳಗೆ ಹೋದಳು.

ಕೆಲಹೊತ್ತಿನಲ್ಲಿಯೇ ಫಲಾಹಾರ ಹಾಗೂ ಹಾಲನ್ನು ತಂದು ಅತಿಥಿಯ ಮುಂದಿಟ್ಟಳು. ನರೇಂದ್ರ ನಕ್ಕ. "ನೀವೊಂದು ವಿಚಿತ್ರ ಪ್ರಾಣಿ ನೋಡಿ ಬೇರೆಯವರ ಮನೆಯಲ್ಲಿ ಪರಿಚಯವಿದ್ದಂತೆಯೂ ತೋರಿಸಿಕೊಳ್ಳುವದಿಲ್ಲ. ಮನೆಯಲ್ಲಿ ಮಾತ್ರ ಏನು ಮಾಡಿದರೂ ತಿನ್ನಿಸದೆ ಬಿಡುವದಿಲ್ಲ. ಆ ದಿನದ ಘಟನೆ ನೋಡಿದರೆ ನಾನು ಬರುತ್ತೇನೆಂದು ಕೇಳಿದರೆ ನೀವು ಭೆಟ್ಟಿಯಾಗು ತ್ತೀರೋ ಇಲ್ಲವೋ ಎಂದು ಸುದ್ದಿ ಹೇಳದೆ ಬಂದೆ. ಇನ್ನೆಲ್ಲಿಯೂ ನೀವು ಹೋಗಲಾರಿರಿ."

ವಿಜಯೆ ಮಾತಾಡಲಿಲ್ಲ. ನರೇಂದ್ರನೂ ತುಸು ಹೊತ್ತು ಮೌನ ವಾಗಿದ್ದ. "ನನಗೆ ಬಂದುದೇನೋ ಸಣ್ಣ ಜ್ವರ. ಆದರೆ ತುಂಬಾ ಅಶಕ್ತಿ ಯನ್ನುಂಟುಮಾಡಿತು. ನಿಮ್ಮ ಭೆಟ್ಟಿಯಾಗಬಹುದೆಂದು ಅನಿಸಿದ್ದರೆ ಈ ಹೊತ್ತೂ ಬರುತ್ತಿರಲಿಲ್ಲ. ಈ ಹಾದಿಯಿಂದ ಬರುವಾಗ ತುಂಬ ಕಷ್ಟ ವಾಯಿತು."

ವಿಜಯೆ ಮೊದಲಿನಂತೆಯೇ ಮೌನವಾಗಿದ್ದಳು. ನರೇಂದ್ರನು ಆಡಿದ ಮಾತೂ ಆಕೆಗೆ ತಿಳಿದಿರಲಿಲ್ಲ. ನರೇಂದ್ರ ಹಾಲಿನ ಥಾಲಿಯನ್ನು ಬರಿದು ಮಾಡಿಟ್ಟ.

“ ನಾನಿಲ್ಲಿಯ ನೌಕರಿ ಬಿಟ್ಟೆನೆಂಬುದು ಬಹುಶಃ ಕೇಳಿರಲಿಕ್ಕಿಲ್ಲ. ಈಗ ಬರಲು ಅದೂ ಒಂದು ಕಾರಣ. ಇರಲಿ, ನಿಮ್ಮ ಲಗ್ನದ ಆಮಂತ್ರಣ ಪತ್ರ ಕೈಸೇರಿದೆ. ಆದರೆ ವಿವಾಹ ನೋಡಿ ಹೋಗುವ ಸೌಭಾಗ್ಯ ನನಗೆ ಲಭಿಸುವಂತಿಲ್ಲ. ಅದೇ ದಿನ ಬೆಳಗಿನಲ್ಲಿ ನಮ್ಮ ಹಡಗ ಕರಾಚಿಯಿಂದ ಹೊರಡುವದು.

“ ಕರಾಚಿಯಿಂದ? ನೀವು ಎಲ್ಲಿಗೆ ಹೋಗಲಿರುವಿರಿ ? ” ಆಕೆಯ ದನಿಯಲ್ಲಿ ಅಂಜಿಕೆ ಬೆರೆತಿತ್ತು. “ ದಕ್ಷಿಣ ಆಫ್ರಿಕೆಗೆ. ಪಂಜಾಬದಲ್ಲಿಯೂ ಒಂದು ನೌಕರಿ ಸಿಗುವಂತಿತ್ತು. ಆದರೆ ನೌಕರಿ ಮಾಡುವದಾದ ಮೇಲೆ ದೊಡ್ಡ ನೌಕರಿಯನ್ನೇ ಹಿಡಿಯುವುದು ಒಳಿತೆಂದು ಭಾವಿಸಿದೆ. ನನಗೆ ಪಂಜಾಬವೂ ಒಂದೇ, ಕೆಂಪ ಕಾಲೋನಿಯೂ ಒಂದೇ. ನಮ್ಮಿಬ್ಬರ ಅಂತಿಮ ಭೆಟ್ಟಿ ಇದೇಯೆಂದು ತೋರುತ್ತಿದೆ. ”

ಆಕೆಗೆ ದುಃಖ ಇಮ್ಮಡಿಸಿತು. ಕೊನೆಯ ವಾಕ್ಯ ಕೇಳಿಸಿತೋ ಇಲ್ಲವೋ? “ ನಲಿನಿ ಒಪ್ಪಿದಳೇ? ನೌಕರಿ ಸಿಕ್ಕರೂ ಇಷ್ಟು ಬೇಗನೇ ಊರನ್ನು ಬಿಡುವಿರಾ ? ಆಕೆಗೆ ಎಲ್ಲವನ್ನೂ ತಿಳಿಸಿ ಹೇಳಿರುವಿರಾ ? ಅಷ್ಟು ದೂರ ಹೋಗಲು ಆಕೆ ಸಮ್ಮತಿಸಿದುದಾದರೂ ಹೇಗೆ ? ” ಇತ್ಯಾದಿ ಪ್ರಶ್ನೆಗಳ ಮಳೆಗರೆದಳು.

“ ನಿಲ್ಲಿ ನಿಲ್ಲಿ! ಇವೆಲ್ಲ ನಾನು ಯಾರೊಡನೆಯೂ........”

ಮಾತು ಮುಗಿಸುವಷ್ಟು ತಾಳ್ಮೆ ಇರಲಿಲ್ಲ. “ ಇದೆಂದೂ ಆಗದು. ನಾವೇನೂ ಜೀವವಿಲ್ಲದ ವಸ್ತುಗಳೆಂದು ಭಾವಿಸಿರುವಿರಾ ? ನಮ್ಮ ವಿಚಾರಕ್ಕೇನು ಬೆಲೆ ಇಲ್ಲವೇ ? ಆಕೆಯ ಸಮ್ಮತಿ ಇಲ್ಲದೆ ಅವಳನ್ನು ಅಷ್ಟು ದೂರ ಒಯ್ಯುವಿರಾ ?”

ನರೇಂದ್ರನಿಗೆ ಅರ್ಥವೇ ಆಗಲಿಲ್ಲ. “ ಅದುದಾದರೂ ಏನು ? ತುಸು ಬಿಡಿಸಿ ಹೇಳಬಾರದೇ ? ಈಗ ತಾನೇ ದಯಾಲಬಾಬುಗಳಲ್ಲಿ ಹೋಗಿದ್ದೆ. ಅಲ್ಲಿಯೂ ಸಹ ಇದೇ ಅರ್ಥದ ಮಾತು ನಡೆಯಿತು. ನನ್ನ ಬರಹೋಗುವಿಕೆ

ಯಿಂದ ನಲಿನಿಗೇನು ಸಂಬಂಧ— ಆಕೆ ಅಡ್ಡಿಯನ್ನಾದರೂ ಏಕೆ ಮಾಡು ವಳು? ಇವುಗಳಲ್ಲೆಲ್ಲ ಏನೋ ರಹಸ್ಯವಿರಬೇಕು.— ತುಸು ತಿಳಿಸಿ ಹೇಳಿದ ರಾಗದೇ?"

''ನಲಿನಿಯೊಡನೆ ಮದುವೆಯ ಪ್ರಸ್ತಾಪ ನಡೆದಿಲ್ಲವೇ?"

ನರೇಂದ್ರನಿಗೆ ದಿಕ್ಕೇ ತೋಚಲಿಲ್ಲ. "ಇಲ್ಲ. ಹೀಗೆಂದೂ ನಡೆದಿಲ್ಲ."

''ಹೀಗೆ ನಡೆದಿಲ್ಲ! ಆದರೆ ಮಾಡುವುದು ಯೋಗ್ಯವೇ ಇದೆ. ನಿಮ್ಮ ಒಲವನ್ನು ಈಗ ಎಲ್ಲರೂ ಅರಿತಿದ್ದಾರೆ.''

''ಈ ಅನಿಷ್ಟ ಹುಟ್ಟಿಸಿದವರಾದರೂ ಯಾರು? ಆಕೆಯಂತು ಹೇಳಿರ ಲಿಲ್ಲ. ಯಾಕೆಂದರೆ ಇದು ಅಸಂಭವವೆಂದು ಆಕೆಗೆ ಗೊತ್ತಿರಲಿಲ್ಲ.''

''ಅಸಂಭವವೇಕೆ?"

''ಅದಿರಲಿ. ಅದರಲ್ಲೊಂದು ಕಾರಣ ಹೀಗೆ. ನಾನು ಹಿಂದು, ಆಕೆ ಬ್ರಾಹ್ಮಣ. ಇದರ ಹೊರತಾಗಿ ನಮ್ಮ ಜಾತಿಯಾದರೂ ಒಂದಲ್ಲ.''

''ನಿಮಗೂ ಜಾತಿಭೇದ ಬಾಧಿಸುತ್ತಿದೆಯೇ?''

''ಜಾತಿಭೇದ ಮನ್ನಿಸದೇ ಏನು ಮಾಡಲಿ? ಹಿಂದೂ ಧರ್ಮದಲ್ಲಿ ಹಾಗೇ ಇದೆ.''

''ಅದನ್ನು ನಾನೂ ಒಪ್ಪುತ್ತೇನೆ. ಆದರೆ ಒಳಿತೆಂದು ಭಾವಿಸುವದಿಲ್ಲ. ನೀವು ಕಲಿತವರಾಗಿಯೂ ಇದರಲ್ಲಿ ವಿಶ್ವಾಸವೇ?''

''ನನ್ನಂತಹ ಮಂದ ಬುದ್ಧಿಯವರ ಪರಾಕ್ರಮವೆಲ್ಲ ಕೀಟಾಣುಗಳ ಮುಂದೆಯೇ. ಇದರಲ್ಲಿ ನಾನು ಸೋತೆ.''

''ಒಳ್ಳೇದು ಹಾಗಾದರೆ, ಒಂದೇ ಜಾತಿಯವರಾದರೂ ಧರ್ಮ ಮತದ ದೃಷ್ಟಿಯಿಂದ ಅಂತಹ ವಿವಾಹವನ್ನು ಮುರಿಯುವಿರಾ? ನೀವೆಲ್ಲಿಯ ಹಿಂದು ಗಳು. ನೀವಂತೂ ಬಹಿಷ್ಕೃತರು. ನಿಮ್ಮಂತಹರು ಬ್ರಾಹ್ಮಕನ್ನಿಕೆಯನ್ನು ವಿವಾಹವಾದರೆ ನಿಮಗೆ ಬರುವ ಹಾನಿಯೇನು? ನಿಮಗೆ ಈ ಅಹಂಕಾರ ವೇಕೆ? ನಿಜವಾಗಿಯೂ ಇದೇ ನಿಮ್ಮ ಅಭಿಪ್ರಾಯವಿದ್ದರೆ ಮೊದಲೇ ಏಕೆ ಹೇಳಲಿಲ್ಲ?" ಹೀಗೆ ಹೇಳ ಹೇಳುತ್ತ ಕಂಬನಿ ದುಂಬಿತು. ಮೋರೆ ಅಡ್ಡ ಹಾಕಿದಳು. ಆದರೆ ನರೇಂದ್ರನಿಗೆ ಗೊತ್ತಾಗದೇ ಹೋಗಲಿಲ್ಲ. ಆತನಿಗೆ ಆಶ್ಚರ್ಯವಾಯಿತು.

"ಈಗ ನೀವು ಹೇಳುತ್ತಿರುವುದು ನನ್ನ ಅಭಿಪ್ರಾಯವಲ್ಲ."

ಆಕೆಯ ಕುತ್ತಿಗೆಯುಬ್ಬಿ ಬಂದಿತು. "ಇದೇ ನಿಮ್ಮ ಅಭಿಪ್ರಾಯ ವೆಂದು ತಿಳಿದಿರುವೆ."

"ಇಲ್ಲ. ಇದು ನನ್ನ ಅಸತ್ಯ ಅಭಿಪ್ರಾಯವೂ ಅಲ್ಲ. ಸತ್ಯ ಅಭಿಪ್ರಾಯವೂ ಅಲ್ಲ. ನನ್ನ ಅಭಿಪ್ರಾಯ ಅಲ್ಲವೇ ಅಲ್ಲ. ಇದರ ಹೊರತಾಗಿ ನಲಿನಿಯ ಸಲುವಾಗಿ ನೀವೇಕೆ ವ್ಯಥೆ ಪಡುತ್ತಿದ್ದೀರಿ. ಆಕೆಯ ಮನಸ್ಸೆಲ್ಲಿ ಅನುರಕ್ತವಾಗಿದೆಯೆಂಬುದನ್ನು ನಾನು ಬಲ್ಲೆ. ನಾನು ಈ ಭಾಗವನ್ನೇ ಬಿಟ್ಟು ಜಗತ್ತಿನ ಇನ್ನೊಂದು ಮೂಲೆಗೆ ಹೋಗಲಿರುವ ಕಾರಣವೂ ಆಕೆ ಬಲ್ಲಳು. ಅದಕ್ಕಾಗಿ ನನ್ನ ವಿಷಯ ಮನಸ್ಸಿಗೆ ಹಚ್ಚಿ ಕೊಳ್ಳಬೇಡಿ."

"ಆಕೆಯ ಅಭಿಪ್ರಾಯಗಳಿಗೇನೂ ಬೆಲೆಯಿಲ್ಲವೆಂದೇ ನಿಮ್ಮ ಭಾವನೆಯೇ? ಆಕೆಯ ಒಪ್ಪಿಗೆ ಇಲ್ಲದಿದ್ದರೂ ನೀವು ಹೋಗಬಲ್ಲಿರಾ?" —

"ನನ್ನ ಮೇಲೆ ಅಧಿಕಾರ ನಡಿಸುವದು ಯಾರಿಗೂ ಅಶಕ್ಯವಿಲ್ಲ. ಆದರೆ ನನ್ನ ಜೀವನಕ್ಕೊಂದು ಧ್ಯೇಯವಿದೆ. ಅದು ನಿಮಗೂ ಗೊತ್ತಿದೆ. ಒಂದಾನೊ ವೇಳೆ ಅದು ಪರದೇಶಗಳಲ್ಲಿ ಸಾಧ್ಯವಾದರೂ ಆಗಬಹುದು. ಆದರೆ ಈ ದೇಶದಲ್ಲಿ ಇಂತಹ ಹೀನ ದೀನ ದರಿದ್ರನಿದ್ದರೂ ಒಂದೇ, ಇರದಿದ್ದರೂ ಒಂದೇ. ಅದಕ್ಕಾಗಿ ನನ್ನನ್ನು ಅಡ್ಡಗಟ್ಟಬೇಡಿ."

"ನೀವು ದಿನ ದರಿದ್ರರಲ್ಲ. ಇಚ್ಛೆ ಇದ್ದರೆ ಎಲ್ಲವನ್ನು ಪಡೆಯ ಬಲ್ಲಿರಿ."

"ನೀವು ಕೊಡಲು ತಯಾರಾಗಿದ್ದಿರೆಂದು ಬಲ್ಲೆ. ಆದರೆ ಪಡೆಯುವ ವನಲ್ಲಿಯೂ ಯೋಗ್ಯತೆ ಬೇಕು; ಆ ಯೋಗ್ಯತೆ ನನ್ನಲ್ಲಿಲ್ಲ."

"ಅಧಿಕಾರ ವೇಕಿಲ್ಲ? ಸಂಪತ್ತು ನನ್ನದಲ್ಲ. ತಂದೆಯದು. ಇಲ್ಲವಾದರೆ ದಾವೆ ಮಾಡುತ್ತೇನೆಂಬ ಮಾತನ್ನಾಡಲು— ಹಾಸ್ಯವಾಗಿಯೇ ಆಗಲೊಲ್ಲ ದೇಕೆ— ಆ ಅಧಿಕಾರ ಇರಲಿಲ್ಲ. ನಾನೇ ಆಗಿದ್ದರೆ ಇದನ್ನೆಂದೂ ಬಿಡುತ್ತಿರ ಲಿಲ್ಲ. ಎಲ್ಲವನ್ನೂ ವಶಪಡಿಸಿಕೊಳ್ಳುತ್ತಿದ್ದೆ."

ನರೇಂದ್ರನೇನೂ ಹೇಳಲಿಲ್ಲ. ವಿಜಯೆಯೂ ತಲೆಕೆಳಗೆ ಹಾಕಿ ನೀರವ ವಾಗಿ ಕುಳಿತಳು. ನರೇಂದ್ರನೊಮ್ಮೆ ನೀಳವಾಗಿ ದಿಟ್ಟುಸಿರಿಟ್ಟ. ಅದನ್ನು ಕೇಳಿ ವಿಜಯೆ ತಲೆಯೆತ್ತಿದಳು. ನರೇದ್ರನ ಮೋರೆ ಕಪ್ಪಿಟ್ಟಿತ್ತು. ಇಬ್ಬರ

ಕಣ್ಣೂ ಪರಸ್ಪರ ಕೂಡಲು ನರೇಂದ್ರ ನುಡಿದ. "ವಿಜಯಾ, ನಲಿನಿಯು ಇದನ್ನು ಮೊದಲೇ ಕಂಡುಹಿಡಿದಿದ್ದಳು. ಆದರೆ ನಾನೇ ವಿಶ್ವಾಸ ವಿಡಲಿಲ್ಲ. ನನ್ನಂತಹ ನಿರುಪಯೋಗಿಯ ಅವಶ್ಯಕತೆ ಯಾರಿಗಾದರೂ ಇರಬಹುದೆಂದು ನನಗನಿಸಿರಲಿಲ್ಲ. ಅದನ್ನು ನಗೆಯಲ್ಲಿ ತೇಲಿಸಿಬಿಟ್ಟಿದ್ದೆ."

ನರೇಂದ್ರ ಕಾಲಸಪ್ಪುಳ ಕೇಳಿ ಹಿಂದೆ ನೋಡಿದ. ದಯಾಲಬಾಬುಗಳು ಬರುತ್ತಿದ್ದರು.

ದಯಾಲನು ಬಾಗಿಲಲ್ಲಿ ನಿಂತು ಇಬ್ಬರನ್ನೂ ನೋಡುತ್ತಿದ್ದನು. ಕೊನೆಗೆ ವಿಜಯೆಯ ಬಳಿಗೆ ಬಂದು "ಮಗೂ" ಎಂದನು.

ವಿಜಯೆ ಅತ್ತುಬಿಟ್ಟಳು. ಮೃತಪಿತನ ಸ್ಮರಣೆಯಾಯಿತೋ ಯಾರು ಬಲ್ಲರು? ಆತನ ಕಾಲಮೇಲೆ ತಲೆಯಿಟ್ಟು ನಿರರ್ಗಳವಾಗಿ ಅತ್ತುಬಿಟ್ಟಳು.

ದಯಾಲನಿಗೂ ಅಳು ಬಂದಿತು ಅವನೊಬ್ಬನೇ ಈ ದುಃಖದ ಕಥೆಯ ಆದಿ ಅಂತ್ಯವನ್ನು ಅರಿತವನು. ವಿಜಯೆಯ ತಲೆಯ ಮೇಲೆ ಕೈಯ್ಯಾಡಿಸುತ್ತ "ನನ್ನ ತಪ್ಪಿನಿಂದಲೇ ಈ ಅನ್ಯಾಯವಾಯಿತು ಮಗೂ, ನಲಿನಿಯೊಡನೆ ಈಗಲೂ ಇದೇ ಮಾತು ನಡೆದಿತ್ತು. ಆಕೆಗೆಲ್ಲ ಗೊತ್ತಿದೆ. ನಿನ್ನೊಬ್ಬಳನ್ನೇ ನರೇಂದ್ರನು ಪ್ರೀತಿಸುತ್ತಾನೆಂದು ನಾನೇನು ಬಲ್ಲೆ? ನಲಿನಿಯ ಮೋಹದಲ್ಲಿರಬಹುದೆಂದು ನಿಮಗೆ ಹೇಳಿ ಇಷ್ಟೆಲ್ಲ ಅನರ್ಥಕ್ಕೆ ಕಾರಣನಾದೆ. ಇದಕ್ಕೆ ಇನ್ನಾವ ಉಪಾಯವೂ ಇರಲಾರದೇ?"

"ಇಲ್ಲ. ಮರಣದ ಹೊರತು ಇನ್ನಾವ ಹಾದಿಯೂ ಇಲ್ಲ."

"ಛೀ ಮಗಳೆ, ಅಮಂಗಲ ನುಡಿಯಬೇಡ. ಆದರೆ........"

"ಇಲ್ಲ. ಇಲ್ಲ. ನಾನು ವಚನ ಕೊಟ್ಟುಬಿಟ್ಟೆ. ಅದನ್ನೆಂದೂ ಭಂಗ ಮಾಡಲಾರೆ"

ಆಕೆಯ ಕುತ್ತಿಗೆಯುಬ್ಬಿ ಬಂತು. ದಯಾಲನಿಂದಲೂ ಮಾತು ಹೊರಡಲಿಲ್ಲ. ಆಳು ಬಂದು "ಮೂರು ಘಂಟೆಯಾಯಿತು." ಎಂದು ಕೂಗಿದನು.

ಊಟಕ್ಕೆ ಹೋಗಲು ಎಲ್ಲರೂ ಒತ್ತಾಯ ಪಡಿಸಿದರು. ಪರೇಶನು "ಅಮ್ಮಾ, ನಿಮ್ಮ ಸಲುವಾಗಿ ಯಾರೂ ಉಂಡಿಲ್ಲ" ಎಂದನು.

ವಿಜಯೆ ಎದ್ದು ಸಾವಕಾಶ ಹೊರಗೆ ಹೋದಳು.

"ನರೇಂದ್ರ, ಇನ್ನೂ ತನಕ ನಿಮ್ಮ ಊಟವೂ ಆಗಿರುವದಿಲ್ಲವಷ್ಟೇ!"
ನರೇಂದ್ರನ ತಲೆ ಎಲ್ಲಿತ್ತೋ ಯಾರು ಬಲ್ಲರು? "ಇಲ್ಲ" ಎಂದ.
"ಹಾಗಾದರೆ ನನ್ನ ಸಂಗಡ ಬನ್ನಿ" ಎಂದನು ದಯಾಲಬಾಬು.
"ಹೂಂ."

೨೬

ಅದೇ ದಿನ ಸಾಯಂಕಾಲ ಲಗ್ನದ ವಿಷಯವಾಗಿ ಹೇಳಬೇಕಾದುದನ್ನೆಲ್ಲ ರಾಸಬಿಹಾರಿ-ವಿಲಾಸಬಿಹಾರಿಯರು ಹೇಳಿ ಹೋದರು. ಆ ಮೇಲೆ ವಿಜಯೆ ತನ್ನ ಕೋಣೆಗೆಹೋದಳು. ದಯಾಲನು ತನ್ಮಯನಾಗಿ ಕುಳಿತಿದ್ದದ್ದನ್ನು ಕಂಡಳು. ಬರಹೋಗುವವರತ್ತ ಆತನ ಲಕ್ಷ್ಯವೇ ಇದ್ದಿಲ್ಲ. ವಿಜಯೆ ಬಂದು ಎಷ್ಟೋ ಹೊತ್ತು ನಿಂತುಕೊಂಡಳು. ಅವನ ಸಮಾಧಿ ಭಂಗ ಮಾಡಬಾರದೆಂದು ಬಯಸಿ ತಿರುಗಿ ಹೋದಳು. ಆ ಮೇಲೆ ಸುಮಾರು ಒಂದು ತಾಸಿನ ನಂತರ ಬಂದಾಗಲೂ ಅದೇ ರೀತಿ ಕುಳಿತದ್ದರಿಂದ ಸಾವಕಾಶವಾಗಿ ಅವನ ಮುಂದೆ ಹೋಗಿ ನಿಂತುಕೊಂಡಳು.

"ಮಗೂ, ನಿಮಗಾಗಿಯೇ ದಾರಿಕಾಯುತ್ತಿದ್ದೆ."

"ಹಾಗಾದರೆ ಕರೆಯಲಿಲ್ಲವೇಕೆ?"

"ನೀವು ಏನೋ ಮಾತಿನಲ್ಲಿ ತೊಡಗಿದ್ದಿರಿ. ನಡುವೆ ಬಾಯಿ ಹಾಕುವದೇಕೆಂದು ಇಲ್ಲಿ ಬಂದು ಕುಳಿತಿದ್ದೆ. ನಾಳೆ ಮಧ್ಯಾಹ್ನ ನೀವು ನಮ್ಮಲ್ಲಿಗೆ ಬರಬೇಕು. ಇಲ್ಲ ಎಂದರೆ ಆಗದು. ಅದಕ್ಕಾಗಿ ನಾನೇ ಇಲ್ಲಿಯ ತನಕ ನಡೆದು ಬಂದೆ. ನಿಮಗೆ ಬರಲು ಬಿಸಿಲಾದೀತೆಂದು ಪಲ್ಲಕ್ಕಿಯವರಿಗೆ ಹೇಳಿಟ್ಟಿರುವೆ. ಅವರು ಸಕಾಲವಲ್ಲಿ ನಿಮ್ಮನ್ನು ಕರೆಯಲು ಬರುವರು."

"ಒಂದು ಪತ್ರ ಕಳಿಸಿದ್ದರೆ ಬರುತ್ತಿದ್ದೆ. ನೀವೇಕೆ ವೃಥಾ ಶ್ರಮಪಟ್ಟುಕೊಂಡಿರಿ."

"ನೆನಪಿಟ್ಟುಕೊಳ್ಳಿ. ಈ ಮುದಿ ಮನುಷ್ಯನಿಗೆ ಮಾತು ಕೊಡುತ್ತಿದ್ದೀರಿ. ನೀವು ಬರದಿದ್ದರೆ ನಾನು ಇನ್ನೊಮ್ಮೆ ನಡೆದು ಬರಬೇಕಾದೀತು."

"ಆಗಲಿ."

ಇವನು ಹೀಗೇಕೆ ಒತ್ತಾಯಮಾಡುತ್ತಿದ್ದಾನೆಂದು ಆಕೆಗೆ ವಿಸ್ಮಯವಾಯಿತು. ಹಿಂದೆಂದೂ ಆತ ಆಮಂತ್ರಿಸಿರಲಿಲ್ಲ. ಸಾಯಂಕಾಲದ ಊಟಕ್ಕೂ ಕರೆಯದೆ ಮಧ್ಯಾಹ್ನದ ಊಟಕ್ಕೆ ಕರೆಯುತ್ತಿದ್ದಾನೆ. ವಚನ ಪಾಲನೆಗಾಗಿ ಇಲ್ಲದ ಅನುರೋಧ. ಇದರಲ್ಲೇನೋ ಗೂಢವಿರಬೇಕು. ಈ

ಹೊತ್ತು ಬೆಳಗಿನಲ್ಲೇನು ಈ ವಿಚಾರವಿರಲಿಲ್ಲ. ಈ ಅತ್ಯಲ್ಪ ಕಾಲದಲ್ಲಿ ಪಾಲಕಿಯು ವ್ಯವಸ್ಥೆಯನ್ನೂ ಸಹ ಮಾಡಿದರೇ?

"ಕಾರಣವೇನೆಂದು ಹೇಳಬಾರದೇ?"

"ಇಲ್ಲ ಮಗೂ, ಊಟಕ್ಕಿಂತ ಮೊದಲು ಹೇಳಲಾರೆ."

"ಕಾರಣ ಹೇಳದಿದ್ದರಿಲ್ಲ. ಯಾರ್ಯಾರಿಗೆ ಆಮಂತ್ರಿಸಿರುವಿರಿ?"

"ನಿಮಗೆಲ್ಲರ ಪರಿಚಯವಿಲ್ಲ. ಮಗಳೇ, ಅವರಲ್ಲಿ ಒಬ್ಬ ರಾಸ ಬಿಹಾರಿ, ಇನ್ನೊಬ್ಬ. ನರೇಂದ್ರ."

ದಯಾಲ ಹೊರಟುಹೋದ ನಂತರ ಇದರ ಕಾರಣವನ್ನು ಮನದಲ್ಲಿಯೇ ಹುಡುಕ ಹತ್ತಿದಳು. ಆದರೆ ಯೋಚಿಸಿದಷ್ಟೂ ಬಗೆಹರಿಯದೆ ನಿರಾಶೆ ಸಂದೇಹ ಬಲಿಯಹತ್ತಿತು.

ಮೂರನೇ ದಿನ ಎರಡು ಘಂಟೆಯಾದರೂ ಪಾಲಕಿ ಬರಲಿಲ್ಲ. ಸಿಂಗಾರಾಗಿ ದಾರಿ ಕಾಯುತ್ತಿದ್ದಳು. ಜನರನ್ನು ಕಳಿಸಿ ಸುದ್ದಿ ತಿಳಕೊಳ್ಳೋಣವೆಂದರೂ ಸಂಕೋಚ. ಆದರೆ ಅಷ್ಟೊತ್ತಿಗೆ ಪಾಲಕಿ ಬಂತೆಂದು ಪರೇಶ ಸುದ್ದಿ ತಂದ.

ಆಕೆ ದಯಾಲನ ಮನೆಗೆ ಹೊರಟಾಗ ಒಂಬತ್ತು ತಾಸು ಹೊತ್ತು ಬಂದಿತ್ತು. ರಾಸಬಿಹಾರಿ ಕೆಲಸದಲ್ಲಿ ಮಗ್ನನಾಗಿದ್ದ. ಆತನು ಪಾಲಕಿಯ ಹತ್ತರ ಬಂದು "ಇದೇನು ಮುದುಕನ ಹುಚ್ಚೋ ಕಾಣೆ. ನನಗೂ ಸಾಯಂಕಾಲ ಬರಲು ಹೇಳಿದ್ದಾನೆ. ಸಾಯಂಕಾಲದೊಳಗಾಗಿ ಪಾಲಕಿ ಬರದಿದ್ದರೆ ತನಗೆ ಬರಲಿಕ್ಕಾಗುವದಿಲ್ಲೆಂದು ತಿಳಿಸು." ಎಂದ ನಿಜಯೆಗೆ.

ಮನೆಯೆಲ್ಲ ತಳಿರು ತೋರಣಗಳಿಂದ ಅಲಂಕೃತವಾಗಿತ್ತು. ಬಾಗಿಲ ಇಕ್ಕಡೆಗಳಲ್ಲಿ ನೀರಿನ ಕಲಶಗಳಿದ್ದವು. ಇದನ್ನೆಲ್ಲ ಕಂಡು ವಿಜಯೆ ಚಕಿತಳಾದಳು. ಊರ ಸದ್ಗೃಹಸ್ಥರೊಡನೆ ದಯಾಲ ಮಾತಾಡುತ್ತ ಕುಳಿತಿದ್ದ. ವಿಜಯೆಯನ್ನು ಕಂಡೊಡನೆಯೇ ಮುಂದೆ ಬಂದು ಕೈಹಿಡಿದು "ಮಗಳೇ" ಎಂದು ಸಂಬೋಧಿಸಿದ.

"ಹಸಿವೆಯಾಗಿ ಹೊಟ್ಟೆಯಲ್ಲೆಲ್ಲ ಉರಿ ಎದ್ದಿದೆ. ಇದೇ ಏನು ನಿಮ್ಮ ಮಧ್ಯಾಹ್ನದ ಆಮಂತ್ರಣ?"

"ಈಹೊತ್ತು ನೀವು ಕಾನೇ ಭಟ್ಟಾಚಾರ್ಯರ ಹೇಳಿಕೆಯನ್ನು ಮನ್ನಿಸಲೇ ಬೇಕು."

ಮುಂದಿನ ಕೋಣೆಯಲ್ಲಿ ವಿವಾಹದ ಸಿದ್ಧತೆ ನಡೆದಿತ್ತು. ಇದೆಲ್ಲ ಏನೆಂದು ಸರಿಯಾಗಿ ತಿಳಿಯದಿದ್ದರೂ ಆಕೆಗೆ ಗಾಬರಿಯಾಯಿತು.— ಆದರೂ ಕೇಳುವ ಸಾಹಸವಾಗಲಿಲ್ಲ.

" ಸಾಯಂಕಾಲ ಲಗ್ನವಿದೆ. ನಿನ್ನ ವಿವಾಹ ವಿಜಯೆ. ಸೌಭಾಗ್ಯ ದಿಂದ ಇಂದೇ ಸುಮುಹೂರ್ತ ದೊರೆತಿತು. ಸಿಗದಿದ್ದರೂ ಇಂದೇ ಮಾಡಿ ಮುಗಿಸಬೇಕಾಗುತ್ತಿತ್ತು. ಎಲ್ಲ ಕೂಡಿ ಬಂದು ವ್ಯವಸ್ಥೆಯಾಗಿದೆ. ಈ ಹೊತ್ತಿನ ದಿನ ಪಂಚಾಂಗದಲ್ಲಿ ನಿಮ್ಮ ಸಲುವಾಗಿಯೇ ಸೃಷ್ಟಿಯಾಗಿದೆ ಯೆಂದು ಕಾನೇ ಭಟ್ಟಾಚಾರ್ಯರು ಹೇಳುತ್ತಾರೆ" ಎಂದು ತಿಳಿಸಿ ಹೇಳಿದನು.

ವಿಜಯೆಯ ಮೋರೆ ಮಲಿನವಾಯಿತು. "ನನಗೇನು ಹಿಂದೂ ರೀತಿಯ ವಿವಾಹ ಮಾಡುವಿರಾ? "

" ಹಿಂದೂ ಜನರ ವಿವಾಹ ವಿವಾಹವಲ್ಲವೇ ಮಗೂ? ರೂಢಿಯ ಮೂಲಕ ನಾನು ನಿನ್ನೆ ಇಡೀ ದಿನ ವಿಚಾರ ಮಾಡಿದರೂ ಬಗೆಹರಿಯಲಿಲ್ಲ. ನಲಿನಿ ತಿಳಿಸಿಕೊಟ್ಟಳು. ಮಾವಾ, ಅವರ ತಂದೆ ಯಾರಿಗೆ " ಕೊಡಬೇಕೆಂದು ಹೇಳಿರುವನೋ ಅವರ ಕೈಯ್ಯಲ್ಲಿಯೇ ಕೊಡು. ಬ್ರಾಹ್ಮ ವಿವಾಹದ ಹಟ ಮಾಡಿ ಅಪಾತ್ರ ದಾನ ಮಾಡುವಿರಾ? ಮನಸ್ಸಿನ ಮಿಲನವೇ ನಿಜವಾದ ವಿವಾಹ. ಅಲ್ಲದೆ ವಿವಾಹದ ಮಂತ್ರವನ್ನು ಯಾವ ಭಾಷೆಯಲ್ಲಿ ಹೇಳಿದ ರೇನು ?ಯಾವ ಭಟ್ಟ ಓದಿದರೇನು ? ' ಎಂದಳು. ನನಗೂ ಹೌದೆನಿಸಿತು. ದೇವರೇ ನಿನಗೆಲ್ಲ ಗೊತ್ತು. ಜನತೆಯ ದೃಷ್ಟಿಯಿಂದ ತಪ್ಪುಗಾರನಾದರೂ ನಿನ್ನಲ್ಲಿ ಅಪರಾಧ ಮಾಡಿಲ್ಲ ಎಂದು ನಲಿನಿಗೆ ಇನ್ನೊಂದು ಶಂಕೆಯ ವಿಷಯ ವಾಗಿ ಕೇಳಿದೆ. ಆಕೆಯೆಂದಳು— ' ವಿಜಯೆಯ ಮನಸ್ಸು ಮುರಿಯುವ ದಕ್ಕಿಂತ ಮಾತು ಮುರಿಯುವದೇನು ಅಗಾಧವು? ' ನನಗೆ ಆಶ್ಚರ್ಯವಾಗಿ ' ಇದನ್ನೆಲ್ಲ ಯಾರಿಂದ ಕಲಿತೆ ನಲಿನೀ ' ಎಂದು ಕೇಳಿದೆ. "ಇವೆಲ್ಲ ನರೇಂದ್ರ ನಿಂದ ಕಲಿತೆ. ಸತ್ಯದ ಸ್ಥಾನ ಹೃದಯವೇ ಹೊರತು, ಮುಖವಲ್ಲ. ಬಾಯಿಂದ ಹೊರಟಿದೆಯೆಂದ ಮಾತ್ರಕ್ಕೆ ಸತ್ಯವಲ್ಲ. ಆದರೂ ತಾವು—'ಸತ್ಯ ವಂತರೆನ್ನುವ ಮಂದಿ–ಸತ್ಯದೊಡನೆ ಪ್ರೇಮವಿದೆಯೆಂದಲ್ಲ; ಸತ್ಯ ಭಾಷಣ ವೆಂಬ ದಾಂಭಿಕ ಪ್ರೇಮಕ್ಕಾಗಿ ಹೀಗೆ ಹೇಳುತ್ತಾರೆ. "

ಆತ ತುಸು ತಡೆದು " ನರೇಂದ್ರನು ನಿನ್ನನ್ನೆಷ್ಟು ಪ್ರೀತಿಸುವನೆಂದು ನೀನರಿಯೆ. ಆತನು ನಿನ್ನೊಡನೆ ನಡೆದ ರೀತಿಯನ್ನೆಲ್ಲ ಜ್ಞಾಪಿಸಿಕೋ. ಅಪ ರಾಧವನ್ನು ನಿನ್ನ ತಲೆಯ ಮೇಲೆ ಹಾಕಲು ಆತನೆಂದೂ ಸಿದ್ಧನಿಲ್ಲ."

ಆಕೆಯೇನೂ ಮರುಮಾತಾಡಲಿಲ್ಲ. -ನಲಿನಿ ಒಳಗೆ ಕೆಲಸದಲ್ಲಿ ದ್ದಳು. ವಿಜಯೆ ಬಂದುದನ್ನು ಕೇಳಿ ಓಡಿ ಬಂದಳು. " ನಿನ್ನನ್ನು ಸಿಂಗರಿ

ಸುಖ ಭಾರವಿಲ್ಲ ನನ್ನದು, ವಿಜಯಾ" ಎಂದವಳೇ ಔತ್ಸಾಹದಿಂದ ಎಳೆದು ಕೊಂಡೇ ಹೋದಳು.

ಎರಡು ತಾಸಿನ ನಂತರ ಆಕೆಯನ್ನು ಅಲಂಕರಿಸಿ ವಧುವಿನ ಸ್ಥಾನದಲ್ಲಿ ಕುಳ್ಳಿರಿಸಲಾಯಿತು. ಮುಂದಿನ ಕಿಡಕಿ ತೆರೆದಿದ್ದು. ಪರಲೋಕಗತ ತಂದೆ ತಾಯಿಯರ ಆಶೀರ್ವಾದದಂತೆ ಬೆಳದಿಂಗಳು ಪಸರಿಸಿತ್ತು.

ಕನ್ಯಾದಾನ ಮಾಡಲು ಕುಳಿತವಳು ವಿಜಯೆಯ ದೂರದ ಅತ್ತೆಯಾಗ ಬೇಕು. ಭಟ್ಟಾಚಾರ್ಯನೂ ಎರಡು ಮೂರು ತಲಗಳೆಯ ಹಿಂದೆ ಅದೇ ಮನೆತನದ ಕುಲಪುರೋಹಿತನಾಗಿದ್ದನಂತೆ.

ಮದುವೆ ಮುಗಿದು ವಧೂವರರು ಏಳುವ ಹೊತ್ತಿಗೆ ರಾಸಬಿಹಾರಿ ಬಂದು ಮುಟ್ಟಿದ. ದಯಾಲನು ಸನ್ಮಾನದಿಂದ ಕೂಡ್ರಿಸಿ "ಮಂಗಲ ಕಾರ್ಯವಂತೂ ನಿರ್ವಿಘ್ನವಾಗಿ ಸಾಂಗವಾಯಿತು. ಮನಸ್ಸಿನಲ್ಲಿ ಯಾವುದೇ ತರದ ಕೊಂಕು ಇಟ್ಟುಕೊಳ್ಳದೆ ಇವರನ್ನು ಹರಸು."

"ಪರವೀರನ ಮಗಳ ಮದುವೆಯನ್ನು ಹಿಂದೂ ಧರ್ಮದಂತೆಯೇ ನಡೆಯಿಸಿದೆಯಾ? ನನಗೆ ಕೇಳಿದರೆ ಇದರ ಆವಶ್ಯಕತೆ ಇದ್ದಿಲ್ಲ."

"ವಿವಾಹವೆಲ್ಲವೂ ಒಂದೇ ಅಲ್ಲವೇ?"

ರಾಸಬಿಹಾರಿಯ ದನಿ ಕಠೋರವಾಯಿತು. "ಇಲ್ಲ. ತಂದೆಯನ್ನು ಹೊರಗೆ ಹಾಕಿದ ವಿಚಾರವಾದರೂ ಮಗಳಿಗೆ ಬರಬಾರದಿತ್ತೇ?"

ಹತ್ತಿರದಲ್ಲಿದ್ದ ನಲಿನಿ ನುಡಿದಳು. "ತನ್ನ ತಂದೆಯ ನಿಜವಾದ ಅಪ್ಪಣೆಯನ್ನು ಆಕೆ ಪಾಲಿಸಿದ್ದಾಳೆ. ನಿಮಗೂ ಸಹ ದಿವಂಗತರ ಇಚ್ಛೆ ಏನೆಂಬುದು ಗೊತ್ತಿರಬೇಕು. ಅದರಂತೆಯೇ ನಡೆಯಲಾಗಿದೆ."

ಈ ಉದ್ಧಟ ಹುಡುಗಿಯೆಡೆಗೆ ದಿಟ್ಟಿಸಿ ನೋಡಿ "ಹೂಂ" ಎಂದು ಆತ ಹೊರಡಲು ಸಿದ್ಧನಾದುದನ್ನು ನೋಡಿ ನಲಿನಿಯು ಯಜಮಾನಿಯಂತೆ "ಮದುವೆಯ ಮನೆಗೆ ಬಂದು ಹಾಗೇ ಹಿಂತಿರುಗುವಿರಾ? ಅದಾಗದು. ಊಟ ಮಾಡಿಯೇ ಹೋಗಬೇಕು. ನಾನು ನಿಮ್ಮನ್ನು ಕರೆಸಲಿಕ್ಕೆ ಮಾವನಿಗೆಷ್ಟು ಒತ್ತಾಯ ಮಾಡಿರುವೆನೆಂಬುದನ್ನು ಬಲ್ಲಿರಾ?"

ಆತ ಮರುಮಾತಾಡದೆ ಅಗ್ನಿನೇತ್ರದಿಂದ ನೋಡಿ ಮೆಲ್ಲನೆ ಜಾರಿಕೊಂಡನು.

